# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

**ಮಾ**ನವರೆಲ್ಲ ಆಕಾರದಲ್ಲಿ ಒಂದೇ, ಹೊಟ್ಟೆಯೂ ಒಂದು ಗೇಣಿನಷ್ಟೇ. ಆದರೆ ಗುಣಗಳಲ್ಲಿ ಎಷ್ಟೋ ವ್ಯತ್ಯಾಸಗಳು. ಒಂದೇ ಹೊಟ್ಟೆಯಲ್ಲಿ ಹುಟ್ಟಿದವರು ಕೂಡ ಒಬ್ಬರನ್ನೊಬ್ಬರು ದೋಚಲು ನೋಡುವರು. ಆದರಿಂದ ಪಾಪದವರೂ ದಾಕ್ಷಿಣ್ಯದವರೂ ಯಾವಾಗಲೂ ಕಷ್ಟ ಅನುಭವಿಸಬೇಕಾಗುತ್ತದೆ. ಇದಕ್ಕೆ ಕಾರಣ ಬಹಿರಂಗ ಜೀವವಾದ ಹಣ. ಅದನ್ನು ಎಷ್ಟು ನ್ಯಾಯವಾಗಿ ಸಂಪಾದಿಸಬೇಕೆಂಬುದನ್ನು ಈ ಸಂಚಿಕೆಯ "ನ್ಯಾಯವಾದ ಹಣ" ಎಂಬ ಕಥೆಯಲ್ಲಿ ಕಾಣಬಹುದು.

## ಅಮರವಾಣಿ

**ಗ್ರಾಮಸ್ತು ಸಸ್ಯಹೀನಶ್ಚ, ಸ್ವಾಮಿಹೀನಂ ಚ ಮಂದಿರಮ್**
**ಪಂಥಾಃ ಸಹಾಯಶೂನ್ಯಶ್ಚ, ರುದ್ರಭೂಮಿಸಮಾಃ ಸ್ಮೃತಾಃ**

ಬೆಳೆ ಬೆಳೆಯದ ಊರು, ಯಜಮಾನನಿಲ್ಲದ ಮನೆ, ಸಹಾಯಕ ನಿಲ್ಲದ ಪ್ರಯಾಣ ಮಾರ್ಗ ಸ್ಮಶಾನಕ್ಕೆ ಸಮಾನವಾದುವು.

ಸಂಪುಟ: ೭೩   ಡಿಸೆಂಬರ್ '೮೪   ಸಂಚಿಕೆ: ೬

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ನಿದ್ರಿಸದಿರುವುದರಲ್ಲಿ ಹೊಚ್ಚ ಹೊಸ ರಿಕಾರ್ಡು

ಇಂಗ್ಲಾಂಡಿಗೆ ಸೇರಿದ ಎರಡನೇ ಮೋರೀನ್ ವೆಸನ್ ೪೪೯ ಗಂಟೆ ೧೭ ನಿಮಿಷಗಳ ವರೆಗೆ ನಿದ್ರೆಮಾಡದಿದ್ದು, ೧೯೭೭ನೇ ವರ್ಷದಲ್ಲಿ ರಿಕಾರ್ಡು ಸೃಷ್ಟಿಸಿದ್ದಾನೆ. ಆದರೆ ಇತ್ತೀಚೆಗೆ ಕೆನಡಾಕ್ಕೆ ಸೇರಿದ ವಿಕ್ಟರ್ ಜಾಟೋ ಎಂಬ ವಿದ್ಯಾರ್ಥಿ ಅವನಿಗಿಂತ ಮೂರು ನಿಮಿಷ ಹೆಚ್ಚಿಗೇ ಎಚ್ಚರವಿದ್ದು ಹೊಸ ರಿಕಾರ್ಡು ಸೃಷ್ಟಿಸಿದನು.

## ಒಂಟಿ ಕಾಲಿನಲ್ಲಿ ನಿಲ್ಲುವುದರಲ್ಲಿ ಪ್ರಪಂಚ ರಿಕಾರ್ಡು



ಶ್ರೀಲಂಕೆಗೆ ಸೇರಿದ ಕುಮಾರ್ ಆನಂದ್ ಎಂಬ ಹುಡುಗನು ಮೂವತ್ತ ಮೂರು ಗಂಟೆಗಳಷ್ಟು ಹೊತ್ತು ಒಂದೇ ಕಾಲಿನಲ್ಲಿ ನಿಂತುಕೊಂಡು ಅದರಲ್ಲಿ ಪ್ರಪಂಚ ರಿಕಾರ್ಡು ಸೃಷ್ಟಿಸಿದನು.



## ಬಾಲ ಮೇಧಾವಿ !

ಬೆಲ್‌ಗ್ರೇಡಿಗೆ ಸೇರಿದ ಹತ್ತು ವಯಸ್ಸಿನ ಮಾಯಿಡ್‌ರಾಗ್ ಮಿಯೊಲರ್, ಇಪ್ಪತ್ತು ವರ್ಷ ಪ್ರಾಯದ ವಿದ್ಯಾರ್ಥಿಗಳು ಓದಿಕೊಳ್ಳುವ ವಿಶ್ವವಿದ್ಯಾಲಯದ ತರಗತಿಗಳಿಗೆ ಅನುಮತಿಸಲ್ಪಟ್ಟನು. ವಿಜ್ಞಾನಶಾಸ್ತ್ರ, ಗಣಿತಗಳನ್ನು ಅಭ್ಯಾಸಮಾಡುವ ಈ ಎಳೆಯ ಮೇಧಾವಿ, ಹುಟ್ಟಿದ ಏಳು ತಿಂಗಳುಗಳಲ್ಲಿ ಮಾತಾಡಲು ಮೊದಲುಮಾಡಿ, ಎರಡು ವರ್ಷ ತುಂಬುವುದರೊಳಗೆ ಓದಲು ಕಲಿತುಕೊಂಡನಂತೆ.

# ನಿಮಗೆ ಗೊತ್ತೇ?

೧. ಅಂತರಿಕ್ಷದಲ್ಲಿ ಕೃತ್ರಿಮ ಗ್ರಹವನ್ನು ಪ್ರವೇಶಗೊಳಿಸಬಹುದೆಂದು ಮೊತ್ತಮೊದಲು ಊಹಿಸಿದ ವಿಜ್ಞಾನವೇತ್ತನು ಯಾರೆಂದು ಗೊತ್ತಿದೆಯೆ ?

೨. ಹುಟ್ಟುವಾಗವೇ ದಂತಗಳೊಂದಿಗೆ ಹುಟ್ಟಿದ ಸುಪ್ರಸಿದ್ಧರಾದವರಾರೋ ತಿಳಿದಿದೆಯೇ ?

೩. ತನ್ನ ಜೇಬಿನಲ್ಲಿ ಯಾವಾಗಲೂ ಗೂಗೆಯನ್ನಿಟ್ಟುಕೊಂಡಿದ್ದ ಸುಪ್ರಸಿದ್ಧ ವನಿತೆ ಯಾರೆಂದು ಬಲ್ಲಿರಾ ?

೪. ಚರಿತ್ರೆಯಲ್ಲಿ ಮೊತ್ತಮೊದಲು ಶುಭ್ರವಾಗಿ ಮುಖಕ್ಷೌರ ಮಾಡಿಕೊಂಡು ಕಾಣಿಸುವ ವ್ಯಕ್ತಿ ಯಾರೆಂದು ಗೊತ್ತೇ ?

(ಉತ್ತರ ೭೪ ನೇ ಪುಟದಲ್ಲಿ)



# ವ್ಯಾಪಾರದಕ್ಷತೆ

ಸಾಕೇತ ಪಟ್ಟಣದಲ್ಲಿ ಮಂದಾರಗುಪ್ತನೆಂಬ ದೊಡ್ಡ ವರ್ತಕನೊಬ್ಬನಿದ್ದನು. ಅವನಿಗೆ ಗಂಡು ಮಕ್ಕಳಿರಲಿಲ್ಲ. ಒಬ್ಬಳೇ ಒಬ್ಬಳು ಮಗಳು ಮಾತ್ರವೇ ಇದ್ದಳು. ವತ್ಸಲೆ ಎಂದು ಅವಳ ಹೆಸರು. ಅವಳಿಗೆ ತಕ್ಕ ವರನನ್ನು ನೋಡಿ ಮದುವೆ ಮಾಡಿ, ಅಳಿಯನಿಗೇ ವ್ಯಾಪಾರವನ್ನೂ, ಯಜಮಾನಿಕೆಯನ್ನೂ ಒಪ್ಪಿಸಿ ತಾನು ನಿಶ್ಚಿಂತನಾಗಿ ವಿಶ್ರಾಂತಿಯಲ್ಲಿರಬೇಕೆಂದು ಮಂದಾರಗುಪ್ತನು ಅಂದುಕೊಂಡಿದ್ದನು.

ಈ ವಿಷಯವನ್ನು ಅವನು ಒಂದು ದಿನ ತನ್ನ ಹೆಂಡತಿಯೊಡನೆ ಪ್ರಸ್ತಾಪಿಸಿದನು. ಆಗ ಅವಳು ತನ್ನ ತಮ್ಮನ ಕುಮಾರನಾದ ಕುಂದಣನು ಎಲ್ಲಾ ವಿಧದಲ್ಲಿಯೂ ವತ್ಸಲೆಗೆ ತಕ್ಕ ವರನೆಂದು ಹೇಳಿದಳು. ಮಂದಾರಗುಪ್ತನು ತನ್ನ ತಂಗಿಯ ಮಗನಾದ ಚಂದ್ರಪಾಲನಿಗೆ ಮಗಳನ್ನು ಕೊಡುವುದು ಒಳ್ಳೆಯದೆಂದು ತನ್ನ ಇಷ್ಟವನ್ನು ಹೇಳಿದನು.

ಆ ಇಬ್ಬರು ವರರೂ ಸರಿಸಮಾನರಾಗಿಯೇ ಇದ್ದುದರಿಂದ, ಇದೊಂದು ಪ್ರಶ್ನೆಯಾಯಿತು. ಸ್ವಲ್ಪಹೊತ್ತು ವಾದ ವಿವಾದ ನಡೆಸಿಕೊಂಡ ಮೇಲೆ, ಚೀಟೀ ಬರೆದು ದೇವರ ಮುಂದೆ ಹಾಕಿ ಎತ್ತಿಸೋಣವೆಂದುಕೊಂಡರು ದಂಪತಿಗಳು.

ಆ ಸಮಯದಲ್ಲಿ ಎಷ್ಟೋ ಕಾಲದಿಂದ ಮಂದಾರಗುಪ್ತನ ಹತ್ತಿರ ಕೆಲಸಮಾಡಿಕೊಂಡಿದ್ದ ಮಂಜರೀಕನೆಂಬವನು ಅಲ್ಲಿಯೇ ಇದ್ದು ಗಂಡಹೆಂಡಿರ ಮಾತುಗಳನ್ನು ಕೇಳುತ್ತಿದ್ದನು. ಅವನು ಯಜಮಾನರೊಂದಿಗೆ, "ಅಯ್ಯಾ, ನಾನು ತಮಗೆ ಸಲಹೆ ಹೇಳುವಷ್ಟು ಸಮರ್ಥನೇನೂ ಅಲ್ಲದಿದ್ದರೂ ತಾವು ಅಪಾರ್ಥ ಮಾಡಿಕೊಳ್ಳದಿದ್ದರೆ, ನಾನೊಂದು ಆಲೋಚನೆ ಹೇಳುವಾ ಅಂತ ಇದ್ದೇನೆ. ಅಪ್ಪಣೆಯಾದರೆ ಹೇಳುತ್ತೇನೆ." ಎಂದನು.

"ಅದೇನು ಹೇಳಪ್ಪ. ಅಪಾರ್ಥವೇನೂ ಮಾಡುವುದಿಲ್ಲ. ನೀನು ಎಂಥವನೆಂದು ನಮಗೆ ಗೊತ್ತಿಲ್ಲವೆ?" ಎಂದನು ಮಂದಾರಗುಪ್ತ.

"ಮುಖ್ಯವಾಗಿ ಇಲ್ಲಿಗೆ ಅಳಿಯ ದೇವರಾಗಿ ಬರಬೇಕಾದವರು ವ್ಯಾಪಾರವನ್ನು ಸರಿಯಾಗಿ ನೋಡಿಕೊಳ್ಳುವ ಸಮರ್ಥರಾಗಿರಬೇಕು ಅಂತ ನೀವಿಬ್ಬರೂ ಅಭಿಪ್ರಾಯಪಡುತ್ತೀರಿ. ಹಾಗಿರುವಾಗ ಕುಂದಣ ಕುಮಾರರಿಗೂ, ಚಂದ್ರಪಾಲರಿಗೂ, ಒಂದು ಪರೀಕ್ಷೆ

ಜೆ. ರತ್ನ



ಇಟ್ಟು ನೋಡಿದರೆ ಒಳ್ಳೇದಾದೀತು. ಆಮೇಲೆ ಬೇಕಾದರೆ ಚೀಟಿ ಎತ್ತಬಹುದಷ್ಟೆ?" ಎಂದನು ಮಂಜರೀಕ.

"ಎಂತಹ ಪರೀಕ್ಷೆ?" ಎಂದು ಮಂದಾರಗುಪ್ತನು ಕೇಳಿದನು.

"ಅವರಿಬ್ಬರನ್ನೂ ಸುವರ್ಣ ದೇಶಕ್ಕೆ ಕಳುಹಿಸೋಣ. ಅಲ್ಲಿ ಯಾವ ಬಗೆಯ ವ್ಯಾಪಾರಕ್ಕೆ ಅವಕಾಶವಿದೆ ಎಂಬುದನ್ನು ತಿಳಿದುಕೊಂಡು ಬರಲಿ. ಅದನ್ನು ನೋಡಿ ಅವರ ದಕ್ಷತೆ ಹೇಗಿದೆ ಎಂದು ಲೆಕ್ಕ ಹಾಕಿಕೊಳ್ಳಬಹುದು" ಎಂದನು ಮಂಜರೀಕ.

"ಸುವರ್ಣ ದೇಶದೊಂದಿಗೆ ವ್ಯಾಪಾರವೇ! ಆ ದೇಶದ ಹೆಸರಿನಲ್ಲಿ ಮಾತ್ರವೇ ಸುವರ್ಣವಿದೆ. ಎರಡು ವರ್ಷಗಳಿಂದ ಮಳೆ ಬಾರದೆ ಒಣಗಿ ಹೋದ ಆ ದೇಶದ ಜನರು ಬರಗಾಲದ ಕಾಟದಿಂದ ನಾನಾ ಬನ್ನಗಳಲ್ಲಿ ಬಳಲುತ್ತಿದ್ದಾರೆ" ಎಂದನು ಮಂದಾರಗುಪ್ತ.

"ಅಯ್ಯಾ, ಆ ಕಾರಣದಿಂದಲೇ ನಾವು ಅವರಿಬ್ಬರನ್ನು ಅಲ್ಲಿಗೆ ಕಳುಹಿಸುವುದು ಅಂದುಕೊಳ್ಳಿ. ಉಳಿದ ದೇಶಗಳಲ್ಲಿರುವ ವ್ಯಾಪಾರದ ಅವಕಾಶಗಳು ಎಂಥವೆಂದು ಪ್ರತಿ ವ್ಯಾಪಾರಿಗೂ ಸುಲಭದಲ್ಲಿ ಗೊತ್ತಾಗುವಂಥಾದ್ದೇ. ಬರಗಾಲದ ಕಷ್ಟಗಳು ಕವಿದುಕೊಂಡಿರುವ ಆ ದೇಶದಲ್ಲಿ ಪ್ರಸ್ತುತದಲ್ಲಾಗಲೀ, ಸ್ವಲ್ಪ ಕಾಲದ ಮೇಲೆಯಾಗಲೀ ಯಾವ ವಸ್ತುಗಳನ್ನು ಲಾಭಕರವಾಗಿ ಮಾರಬಹುದು? ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಅವರಿಬ್ಬರೂ ನೋಡಿ ಬರಲಿ" ಎಂದನು ಮಂಜರೀಕ.

ಈ ಮಾತನ್ನು ಕೇಳಿದ ಮೇಲೆ ಮಂದಾರಗುಪ್ತನಿಗೆ ಈ ಪರೀಕ್ಷೆ ಒಳ್ಳೆಯದೆಂದು ತೋರಿತು. ಅನಂತರ ಅವನು ಕುಂದಣಕುಮಾರನನ್ನೂ, ಚಂದ್ರಪಾಲನನ್ನೂ ವ್ಯಾಪಾರ ದೃಷ್ಟಿಯಲ್ಲಿ ಅಲ್ಲಿಯ ಸ್ಥಿತಿಗತಿಗಳನ್ನು ತಿಳಿದುಕೊಂಡು ಬರುವಂತೆ ಹೇಳಿ ಕಳುಹಿಸಿದನು. ಅದರಂತೆ ಅವರಿಬ್ಬರೂ ಅಲ್ಲಿಗೆ ಹೋಗಿ ಕೆಲವು ದಿನಗಳ ಮೇಲೆ ಹಿಂದಿರುಗಿ ಬಂದರು. ಮಂದಾರಗುಪ್ತನು ಮಂಜರೀಕನನ್ನು ತನ್ನ ಹತ್ತಿರ ಕರೆಯಿಸಿಕೊಂಡು, ಮೊದಲು ಕುಂದಣಕುಮಾರನನ್ನು ಕರೆಯಿಸಿದನು.

"ಈಗ ಸುವರ್ಣ ದೇಶದಲ್ಲಿ ಯಾವ ವಸ್ತುಗಳ ವ್ಯಾಪಾರವು ಲಾಭಕರವಾಗಿ ಇರುತ್ತದೆಂದು ನಿನಗೆ ಅನ್ನಿಸುತ್ತದೆ?" ಎಂದು ಮಂದಾರಗುಪ್ತನು ಅವನನ್ನು ಕೇಳಿದನು.

"ನಿಜಕ್ಕೂ ಹೊಸ ವ್ಯಾಪಾರವನ್ನೇನಾದರೂ ಮಾಡಲು ಯೋಚಿಸಿದರೆ, ಅದಕ್ಕೆ ಸುವರ್ಣ ದೇಶವನ್ನು ಏಕೆ ಆರಿಸಿಕೊಳ್ಳುವಿರೋ ನನಗೆ ಅರ್ಥವಾಗುವುದಿಲ್ಲ. ಅಲ್ಲಿಯ ಪರಿಸ್ಥಿತಿಗಳನ್ನು ನಾವು ಕೇಳಿದುದಕ್ಕಿಂತಲೂ ಹೆಚ್ಚೇ ಭಯಂಕರವಾಗಿದೆ. ಆದರೂ ಅಲ್ಲಿ ನಾವು ವ್ಯಾಪಾರವನ್ನೇ ತಲೆ ಹಾಕುವುದಾದರೆ ಆ ದೇಶಕ್ಕೆ ಧಾನ್ಯಗಳೇ ಮೊದಲಾದ

ಆಹಾರ ಪದಾರ್ಥಗಳನ್ನು ಕಳುಹಿಸುವುದೇ ಒಳ್ಳೇದು. ಅಂತಹುದಕ್ಕೇ ಒಳ್ಳೆಯ ಗಿರಾಕಿ. ಲಕ್ಷ ಲಕ್ಷ ಲಾಭ ಗಳಿಸಬಹುದು" ಎಂದನು ಕುಂದಣಕುಮಾರ.

ಅವನನ್ನು ಕಳುಹಿಸಿದ ಮೇಲೆ ಮಂದಾರಗುಪ್ತನು ಚಂದ್ರಪಾಲನನ್ನು ಕರೆದು, ಕುಂದಣನನ್ನು ಕೇಳಿದ ಹಾಗೆಯೇ ಕೇಳಿದ್ದನು.

ಅದಕ್ಕೆ ಚಂದ್ರಪಾಲನು, "ಸುವರ್ಣ ದೇಶದಲ್ಲಿ ವ್ಯಾಪಾರ ಮಾಡಬೇಕೆಂಬುದು ನಿಮ್ಮ ಉದ್ದೇಶ ವಾದರೆ, ಅದಕ್ಕೆ ನಾವು ಈಗಿಂದೀಗಲೇ ತಕ್ಕ ಏರ್ಪಾಡು ಮಾಡಿಕೊಳ್ಳಬೇಕು. ಅಲ್ಲಿ ಈಗ ಹರಕುಚಿಂದಿ, ತೇಪೆಗಳ ಬಟ್ಟೆ ಧರಿಸಿದವರೇ ತಿರುಗು ತ್ತಿದ್ದಾರೆ. ಶುಭ್ರವಾದ ಒಳ್ಳೆಯ ಬಟ್ಟೆ ಧರಿಸಿದವರು ಒಬ್ಬರೂ ಇಲ್ಲ. ವ್ಯಾಪಾರ ವಿಷಯದಲ್ಲಿ ಒಳ್ಳೆಯ ಅನುಭವವಿರುವ ನಿಮಗೆ ಹೆಚ್ಚಿಗೆ ವಿವರಿಸಬೇಕಾದ ಅಗತ್ಯವಿಲ್ಲವಷ್ಟೆ? ಪ್ರಪ್ರಥಮದ್ದು ಆಹಾರ ವಸ್ತು ಗಳಾದರೂ, ಅದರ ಅನಂತರದ್ದೇ ನಮಗೆ ಒಳ್ಳೆಯ ದೆಂದು ಹೇಳಿಯೇನು" ಎಂದನು.

ಅವನನ್ನು ಕಳುಹಿಸಿದ ಮೇಲೆ ಮಂದಾರಗುಪ್ತನು ಮಂಜರೀಕನೊಂದಿಗೆ, "ತಂಗಿಯ ಮಗನೆಂದು ಚಂದ್ರಪಾಲನ ಮೇಲೆ ನನಗೊಂದು ಪ್ರತ್ಯೇಕ ಅಭಿಮಾನವಿದ್ದುದು ನಿಜವೇ ಆದರೂ, ಸುವರ್ಣ ದೇಶದ ಬರಗಾಲದ ಪರಿಸ್ಥಿತಿಯನ್ನು ನೋಡಿದ ಮೇಲೆ ಕೂಡಾ ಅವನು ಆ ದೇಶದಲ್ಲಿ ವಸ್ತ್ರಗಳ ವ್ಯಾಪಾರ ಒಳ್ಳೆಯದೆಂಬ ಹಾಗೆ ಹೇಳುತ್ತಾನೆ. ಯಾವುದು ಮುಖ್ಯವೋ ಅದನ್ನು ಬಿಡುವುದು ಅವಿವೇಕವಲ್ಲವೆ? ಅಂಥವನಿಗೆ ನನ್ನ ಮಗಳನ್ನು ಕೊಡಕೂಡದೆಂದು ಕಾಣುತ್ತದೆ. ನೀನು ಹೇಳಿದಂತೆ ಈ ಪರೀಕ್ಷೆಯಿಂದ ನಿಜವು ತಿಳಿಯಿತು. ಕುಂದಣನ ಸಾಮರ್ಥ್ಯವೂ ವ್ಯಾಪಾರ ದಕ್ಷತೆಯೂ ಬಯ ಲಾಯಿತು. ಅವನನ್ನೇ ಅಳಿಯನನ್ನಾಗಿ ಮಾಡಿ ಕೊಳ್ಳುತ್ತೇವೆ" ಎಂದನು.



ಅದನ್ನು ಕೇಳಿ ಮಂಜರೀಕನು ಬಹಳ ವಿನಯ ದಿಂದ, "ನನಗೆ ಬೇರೆ ವಿಧವಾಗಿ ಕಾಣುತ್ತದೆ ಯಜ ಮಾನರೇ. ಕುಂದಣರ ಮತ್ತು ಚಂದ್ರಪಾಲರ ವಿಷಯದಲ್ಲಿ ನೀವು ಹಾಕಿಕೊಂಡ ಲೆಕ್ಕ ತಪ್ಪಾಯಿ ತೆನಿಸುತ್ತದೆ. ಇದರಲ್ಲಿ ಚಂದ್ರಪಾಲರೇ ಗೆದ್ದವರೆಂದು ನನ್ನ ಗಣಿಕೆ" ಎಂದನು.

ಮಂದಾರಗುಪ್ತನು ಆಶ್ಚರ್ಯಪಡುತ್ತ, "ಅದು ಹೇಗೆ? ಸ್ವಲ್ಪ ವಿವರಿಸಿ ಹೇಳು ನೋಡುವಾ" ಎಂದನು.

"ಅಲ್ಲಿ ಮೇಲೆ ಮೇಲೆಯೇ ಕಾಣುತ್ತಿರುವ ಸಾಧಕ ಬಾಧಕಗಳನ್ನು ಯಾವ ಸಾಧಾರಣ ವ್ಯಾಪಾರಿ ಯಾದರೂ ತಿಳಿದುಕೊಂಡು ಬಿಡುತ್ತಾನೆ. ಆದರೆ ಭವಿಷ್ಯತ್ತಿನಲ್ಲಿ ಲಭ್ಯವಾಗುವ ಅವಕಾಶಗಳನ್ನು ಮೊದಮೊದಲು ಅಂದಾಜು ಮಾಡುವುದರಲ್ಲೇ ವ್ಯಾಪಾರಿಯ ದಕ್ಷತೆ ಹೊರಬೀಳುತ್ತದೆ. ಕುಂದಣರ ಸಂಗತಿ ನೋಡಿರಿ! ಅವರು ಪ್ರಸ್ತುತ ಸುವರ್ಣ

ದೇಶದಲ್ಲಿರುವ ವ್ಯಾಪಾರದ ಅವಕಾಶ ಮಾತ್ರವೇ ನೋಡಿದರು. ನಾವು ಈ ದೇಶದಿಂದ ಆಹಾರ ಪದಾರ್ಥಗಳನ್ನು ಅಲ್ಲಿಗೆ ಕಳುಹಿಸಬೇಕಾದರೆ ರಾಜನ ಅನುಮತಿ ಲಭಿಸಲಾರದು. ಒಂದು ವೇಳೆ ಸಾಹಸ ಮಾಡಿ ನಾವು ರಹಸ್ಯವಾಗಿ ಕಳಿಸಿದರೂ ಆ ದೇಶದ ಪ್ರಜೆಗಳು ಹಣ ಕೊಟ್ಟು ಅವುಗಳನ್ನು ಕೊಂಡು ಕೊಳ್ಳಲಾರರು. ನಾವು ಕಳುಹಿಸಿದ್ದೆಲ್ಲ ಕೊಳ್ಳೀ ಹೋಗಿ ನಮಗೆ ಭಾರಿ ನಷ್ಟವೇ ಉಳಿದೀತು" ಎಂದನು ಮಂಜರೀಕ.

ಮಂದಾರಗುಪ್ತನು ಅದು ನಿಜವೆಂಬಂತೆ ತಲೆ ಯಾಡಿಸಿ, "ನಾವು ಅಲ್ಲಿಗೆ ವಸ್ತ್ರಗಳನ್ನು ಕಳುಹಿಸಿ ದರೂ ಹಾಗೆಯೇ ಆಗಲಾರದೆ?" ಎಂದು ಕೇಳಿದನು.

"ಚಂದ್ರಪಾಲರು ಆ ದೇಶದೊಂದಿಗೆ ವಸ್ತ್ರ ವ್ಯಾಪಾರವನ್ನು ಈಗಲೇ ಪ್ರಾರಂಭಿಸಬೇಕು ಅನ್ನ ಲಿಲ್ಲವಷ್ಟೆ? ಅದಕ್ಕೆ ತಕ್ಕ ಪ್ರಯತ್ನ ಈಗಲೇ ಪ್ರಾರಂಭಿಸಬೇಕು ಎಂದರು. ವ್ಯಾಪಾರದ ಅನುಭವ ವಿರುವವರಿಗೆ ಹೆಚ್ಚಿಗೆ ಹೇಳುವುದು ಬೇಡವೆಂತಲೂ ಹೇಳಿದರು. ಅವರ ಅಭಿಪ್ರಾಯ ತಿಳಿದೇ ಇದೆ. ನಮ್ಮ ಪಟ್ಟಣದಲ್ಲಿ ಅನೇಕ ನೇಯಿಗೆಗಾರರಿದ್ದಾರೆ. ತಕ್ಕ ಗಿರಾಕಿಗಳಿಲ್ಲದೆ ಅವರ ಮಗ್ಗಗಳು ಮೂಲೆ ಪಾಲಾಗಿವೆ. ನಾವು ಅಗ್ಗದ ದರದಲ್ಲಿ ಉತ್ತಮ ವಾದ ಬಟ್ಟೆಗಳನ್ನು ನೇಯಿಸಲು ಈಗಲೇ ಪ್ರಾರಂಭಿಸಬೇಕು, ಎಂಬುದೇ ಅವರ ಮಾತಿನ ತಿರುಳು" ಎಂದನು ಮಂಜರೀಕ.

ಮಂದಾರಗುಪ್ತನು ಬಹಳ ಕುತೂಹಲದಿಂದ, "ಹೌದು. ಮೊದಲು ಆ ದೇಶದಲ್ಲಿ ಬರಗಾಲದ ಕಷ್ಟ ಹೋಗಬೇಕಲ್ಲವೇ?" ಎಂದನು.

"ಯಾವ ದೇಶದಲ್ಲಿಯೂ ವರ್ಷಗಟ್ಟಲೆ ಮಳೆ ಬಾರದೆ ಹೋಗುವುದಿಲ್ಲ. ಸ್ವಲ್ಪ ಮಳೆ ಬಂದು ಪರಿಸ್ಥಿತಿ ಸರಿಯಾದ ಮೇಲೆ ಸುವರ್ಣ ದೇಶದ ಪ್ರಜೆಗಳು ತಮ್ಮ ಹರಕು ಚಿಂದಿಗಳಿಗೆ ಅಸಹ್ಯ ಪಟ್ಟುಕೊಳ್ಳುತ್ತಾರೆ. ತಿಂಡಿಯ ಅನಂತರ ಮುಖ್ಯ ವಾಗಿ ಬೇಕಾದ್ದು ಬಟ್ಟೆಗಳೇ. ಆದುದರಿಂದಲೇ ಸೂಕ್ಷ್ಮ ಬುದ್ಧಿಯ ಚಂದ್ರಪಾಲನು ತಮಗೆ ಅಂತಹ ಆಲೋಚನೆ ಹೇಳಿದನು" ಎಂದನು ಮಂಜರೀಕ.

ಚಂದ್ರಪಾಲನ ಬುದ್ಧಿ ಎಷ್ಟು ಚುರುಕೆಂದು ಈಗ ಮಂದಾರಗುಪ್ತನಿಗೆ ಅರ್ಥವಾಯಿತು. ಅವನು ಮಗಳು ವತ್ಸಲೆಯನ್ನು ಚಂದ್ರಪಾಲನಿಗೆ ಕೊಟ್ಟು ವೈಭವದಿಂದ ಮದುವೆ ನೆರವೇರಿಸಿದನು.

ಚಂದ್ರಪಾಲನು ಒಂದೆರಡು ವರ್ಷಗಳಲ್ಲಿ ತನ್ನ ವ್ಯಾಪಾರ ದಕ್ಷತೆ ಎಂತಹುದೆಂದು ಅತ್ತೆ ಮಾವಂದಿ ರಿಗೆ ನಿರೂಪಿಸಿದನು.



# ಕಂಚುಕೋಟೆ



ಅನೇಕ ವರ್ಷಗಳ ಹಿಂದೆ ಮಾಹಿಷ್ಮತೀ ನಗರವನ್ನು ಯಶೋವರ್ಧನನೆಂಬ ರಾಜನು ಪಾಲಿಸಿಕೊಂಡಿದ್ದನು. ಅರುವತ್ತು ವರ್ಷಗಳವರೆಗೆ ಅವಿಚ್ಛಿನ್ನವಾಗಿ ಅವನು ಪರಿಪಾಲನೆ ನಡೆಸಿದನು. ಪ್ರಜೆಗಳಿಗೆಲ್ಲ ಅವನ ಮೇಲೆ ಗೌರವವೂ ಭಕ್ತಿ ವಿಶ್ವಾಸಗಳೂ ಬಹು ಚೆನ್ನಾಗಿಯೇ ಇದ್ದುವು. ಕಡೆಗೆ ಅವನು ವೃದ್ಧನಾಗಿ ಹೋಗಿ ಚಿಂತೆಗೆ ಬಿದ್ದನು. ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ರಾಜ್ಯಪಾಲಕನೆನಿಸಿ ಪಟ್ಟಾಭಿಷಿಕ್ತನಾದ ಮೇಲೆ, ಸ್ವತಃ ಅನೇಕ ಯುದ್ಧಗಳನ್ನು ಮಾಡಿ ಜಯಿಸಿ ಅವನು ರಾಜ್ಯದ ವಿಸ್ತಾರಕ್ಕೆ ಕಾರಣನಾಗಿದ್ದನು. ಶತ್ರುಗಳೆಲ್ಲ ಅಂಜಿ ಸುಮ್ಮನೆ ಮುದುಡಿರುವಂತೆ ಆಗಿಹೋಗಿತ್ತು. ಅಷ್ಟು ದೊಡ್ಡ 'ದೇಶಾಧೀಶನಾದ ಯಶೋವರ್ಧನನಿಗೆ ವೃದ್ಧಾಪ್ಯದಲ್ಲಿ ಮನಃಶಾಂತಿ ಇಲ್ಲದೆ ಹೋಗಲಿಕ್ಕೆ ಕಾರಣ ಹೊರಗಿನ ಶತ್ರುಗಳಾರೂ ಅಲ್ಲ; ತನ್ನ ಅನಂತರ ರಾಜ್ಯದ ಗತಿ ಹೇಗೆಂದು ತಿಳಿಯಲಾಗದಂತಿರುವ ಸಾಕ್ಷಾತ್ ಅವನ ಕುಮಾರರೇ !

ಯಶೋವರ್ಧನ ರಾಜನಿಗೆ ತಪೋವರ್ಧನ ಮತ್ತು ಗುಣವರ್ಧನ ಎಂಬ ಇಬ್ಬರು ಪುತ್ರರಿದ್ದರು. ಹಿರಿಯವನಾದ ತಪೋವರ್ಧನನು ಇಪ್ಪತ್ತೈದು ವಯಸ್ಸಿನ ಯುವಕನಾಗಿದ್ದನು. ಅವನು ತಪ್ಪಿ ರಾಜಪುತ್ರನಾಗಿ ಹುಟ್ಟಿದನೋ ಅನಿಸುವಂತಿದ್ದನು. ರಾಜಕಾರ್ಯಗಳಲ್ಲಾಗಲೀ, ಭೋಗಗಳ ಮೇಲಾಗಲೀ, ಲೋಕ ವ್ಯವಹಾರದ ಮೇಲಾಗಲೀ ಅವನಿಗೆ ಮನಸ್ಸಿರಲಿಲ್ಲ. ಅವನು ಯಾವಾಗಲೂ ತನ್ನ ಕಾಲವನ್ನು ಧರ್ಮ ಗ್ರಂಥಗಳನ್ನು ಓದುವುದರಲ್ಲಿಯೂ, ವೇದಾಂತ ತತ್ವಗಳನ್ನು ಕುರಿತು ಪಂಡಿತರೊಂದಿಗೆ ಚರ್ಚಿಸುವುದರಲ್ಲಿಯೂ ಕಳೆಯುತ್ತಿದ್ದನು. ಆಗ ಅವನಿಗೆ ತಿಂಡಿ ತೀರ್ಥಗಳ ಗೊಡವೆಯೂ ಬೇಕಾಗುವುದಿಲ್ಲ. ಅಂತಹವನಿಗೆ ಪಟ್ಟಗಟ್ಟಿದರೆ ರಾಜಕಾರ್ಯಗಳು ಹೇಗೆ ನಡೆದಾವು ?

ಎರಡನೆಯವನಾದ ಗುಣವರ್ಧನನಿಗೆ ಇಪ್ಪತ್ತು ವರ್ಷ ಪ್ರಾಯವಾಗಿತ್ತು. ಅವನದು ಅಣ್ಣನಿಗೆ ತೀರ ವಿರುದ್ಧವಾದ ಗುಣ. ಭೋಗ ವಿಲಾಸಗಳ ಮೇಲಿರು



ವಷ್ಟು ಆಸಕ್ತಿ ಬೇರೆ ಯಾವುದರ ಮೇಲೆಯೂ ಅವನಿಗಿಲ್ಲ. ಧರ್ಮಾಧರ್ಮ ವಿಚಕ್ಷಣೆಯನ್ನೂ ನೋಡಲಾರನು. ಜಂಬಗಾರರು, ತುಂಟರು, ಕಪಟಿಗಳು ಅವನ ಪರಮಾಪ್ತ ಮಿತ್ರರು. ಅವನು ರಾಜನಾದರೆ ದುಷ್ಟನ ಕೈಗೆ ರಾಜ್ಯ ಸಿಕ್ಕಿದಂತೆಯೇ ಸರಿ.

ಒಳ್ಳೆಯ ರೀತಿಯಲ್ಲಿ ರಾಜ್ಯಭಾರ ನಿರ್ವಹಿಸಿ ಸೋತುಹೋದ ಯಶೋವರ್ಧನನು ವೃದ್ಧಾಪ್ಯದ ತನ್ನ ಶೇಷ ಜೀವಿತವನ್ನು ಯಾವುದೋ ಆಶ್ರಮದಲ್ಲಿ ದೈವಧ್ಯಾನ ಮಾಡಿಕೊಳ್ಳುತ್ತ, ಕಳೆಯಬೇಕೆಂದು ಕೊಂಡಿದ್ದನು. ಹಾಗೆ ತಾನು ರಾಜ್ಯವನ್ನು ಬಿಟ್ಟು ಹೋಗುವುದಕ್ಕೆ ಮೊದಲು ಸಮರ್ಥನಾದವನು ಪರಿಪಾಲನೆಯ ಭಾರವನ್ನು ವಹಿಸಿಕೊಳ್ಳಬೇಕಷ್ಟೆ? ಇಲ್ಲದಿದ್ದರೆ ದೇಶವು ಅರಾಜಕವಾಗಿ, ತನ್ನ ಒಳ್ಳೆಯ ಹೆಸರು ಕೂಡಾ ಮಸಿಯೊಳಗೆ ಮುಚ್ಚಿ ಹೋಗಬಹುದು. ಐಹಿಕ ವಿಷಯಗಳ ಮೇಲೆ ಸ್ವಲ್ಪವೂ ಆಸಕ್ತಿ ಇಲ್ಲದ ಹಿರಿಯ ಕುಮಾರ ತಪೋವರ್ಧನನು ರಾಜನಾಗಿಬಿಟ್ಟರೆ ದೇಶಕ್ಕೆ ಕ್ಷೇಮವಾಗಲಾರದು. ಚಿಕ್ಕವನಾದ ಗುಣವರ್ಧನನೊಬ್ಬನೇ ಉಳಿದವನು.

ಗುಣವರ್ಧನನ ದುರ್ಗುಣಗಳನ್ನು ಕುರಿತು ಯಶೋವರ್ಧನನು ತುಂಬಾ ಕೇಳಿದ್ದನು. ಸ್ವತಃ ಅವನಿಗೆ ಅನೇಕಬಾರಿ ಖಂಡಿಸಿ ಬುದ್ಧಿ ಹೇಳಿಯೂ ಆಗಿತ್ತು. ಇಪ್ಪತ್ತು ವಯಸ್ಸಿನ ಯೌವನದ ಉದಯದ ಆ ಕಾಲದಲ್ಲಿ ಯಾವನಾದರೂ ಹಾಗೆಯೇ ಪ್ರವರ್ತಿಸುವನೆಂದು ಯಶೋವರ್ಧನನು ಕ್ಷಮಿಸಿ ನೋಡಿದ್ದೂ ಆಗಿತ್ತು. ಈ ಭಾವನೆಯನ್ನೇ ಬಿಗಿಯಾಗಿ ಹಿಡಿದು ಗುಣವರ್ಧನನ ತಲೆಯ ಮೇಲೆ ರಾಜ್ಯಭಾರದ ಹೊರೆಯನ್ನು ಹಾಕಿಬಿಟ್ಟರೆ, ಅದರ ಹೊಣೆಯೇ ಎಚ್ಚರಿಕೆಯನ್ನು ಬರಿಸಿ ಒಳ್ಳೆಯ ರೀತಿಗೆ ತಿರುಗಿಸಬಲ್ಲುದೆಂಬ ನಂಬಿಗೆಯನ್ನು ಯಶೋವರ್ಧನನ್ನು ಹಿಡಿದನು. ಅವನು ಒಳ್ಳೆಯ ಗುಣಕ್ಕೆ ತಿರುಗಿಬಿಟ್ಟರೆ ಅವನಿಗಿಂತ ಒಳ್ಳೆಯ ಸಮರ್ಥ ರಾಜನು ಬೇರೊಬ್ಬನಿರಲಿಕ್ಕಿಲ್ಲ!

ಈ ವಿಷಯವನ್ನು ಮಂತ್ರಿ ಸಾಮಂತರೊಂದಿಗೆ ಹೇಳಿ ಪ್ರಸ್ತಾಪಿಸಿದಾಗ, ಗುಣವರ್ಧನನು ರಾಜನಾಗುವುದು ಒಳ್ಳೆಯುದಲ್ಲವೆಂದೇ ಅವರೆಲ್ಲ ಅಭಿಪ್ರಾಯಪಟ್ಟರು, ಸಹಜ ರೀತಿಯಲ್ಲಿ ಕ್ರಮವಾಗಿ ಬಂದ ವಾರಸುದಾರನಾದ ಹಿರಿಯ ಮಗ ತಪೋವರ್ಧನನಿರುವಾಗ, ಅವನನ್ನು ಬಿಟ್ಟು ಚಿಕ್ಕವನಿಗೆ ಪಟ್ಟಾಭಿಷೇಕ ಮಾಡಿದರೆ, ಪ್ರಜೆಗಳು ವ್ಯತಿರೇಕಿಸಿ ಬಂಡೇಳಬಹುದೆಂತಲೂ ಹೇಳಿದರು.

ಗುಣಶೀಲನಾಗಿ ಧರ್ಮ ಚಿಂತನೆಯುಳ್ಳವನಾದ ತಪೋವರ್ಧನನು ಮಾಹಿಷ್ಮತೀ ನಗರಕ್ಕೆ ರಾಜನಾಗಿ ಬರುವುದೇ, ಎಲ್ಲರ ಕ್ಷೇಮಕ್ಕೂ ಸಹಾಯವಾಗುವುದೆಂದು ಯಶೋವರ್ಧನನಿಗೆ ಸಲಹೆ ಮಾಡಿದರು.

ಈ ಸಲಹೆ ಯಶೋವರ್ಧನನಿಗೆ ಮೆಚ್ಚಿಕೆಯಾಗಲಿಲ್ಲ. ಕ್ಷಾತ್ರ ಧರ್ಮದಲ್ಲಿ ಸ್ವಲ್ಪವೂ ಆಸಕ್ತಿ ತೋರಿಸದ ತನ್ನ ಹಿರಿಯ ಮಗನು ರಾಜನಾಗುವುದೆಂದರೆ,

ಅವನು ಯಾವ ಮಂತ್ರಿಯ ಕೀಲುಬೊಂಬೆಯಂತೆ ಆಗುವನೆಂದು ಅವನಿಗೆ ತೋರಿತು. ತಾನು ಎಷ್ಟೋ ಯುದ್ಧಗಳನ್ನು ಮಾಡಿ ನೆತ್ತರು ಹರಿಸಿ ಸಂಪಾದಿಸಿದ ರಾಜ್ಯವಿದು. ಅದು ಕಡೆಗೆ ತನ್ನ ವಂಶೀಯರ ಕೈಯಿಂದ ಪರರ ಕೈಗೆ ಹೋಗುವುದೆಂತಲೂ ಅವನಿಗೆ ಭಯವಾಯಿತು.

ಇಂತಹ ಸಂದೇಹಗಳಿಂದ ಯಶೋವರ್ಧನನು ಕೆಲವು ದಿನ ಮನೋಮಥನ ಮಾಡಿಕೊಂಡ ಮೇಲೆ ಒಂದು ನಿರ್ಣಯಕ್ಕೆ ಬಂದನು. ಅದೇನೆಂದರೆ. ತನ್ನ ರಾಜ್ಯದೊಳಗಿನ ಎಲ್ಲಾ ಸಾಮಂತರನ್ನೂ, ಹಿರಿಯರನ್ನೂ ಪುರಪ್ರಮುಖರನ್ನೂ ಒಂದು ಕಡೆಯಲ್ಲಿ ಸಮಾವೇಶಗೊಳಿಸಬೇಕು. ಅವರೆಲ್ಲರ ಮುಂದೆ ತನ್ನ ಅಭಿಪ್ರಾಯವನ್ನು ತಿಳಿಯಪಡಿಸಿ, ಚಿಕ್ಕವನಾದ ಗುಣವರ್ಧನನನ್ನು ತನ್ನ ಅನಂತರ ರಾಜನೆಂದು ಅಂಗೀಕರಿಸಿಕೊಳ್ಳುವಂತೆ ಕೇಳಿಕೊಳ್ಳಬೇಕು. ಆಗ ಪ್ರಜೆಗಳ ಅಭಿಪ್ರಾಯ ತಿಳಿಯುತ್ತದೆ.

ಹೀಗೆ ನಿಶ್ಚಯಿಸಿ, ತನ್ನ ರಾಜ್ಯದೊಳಗಿನ ಸಾಮಂತರನ್ನೂ, ಹಿರಿಯರನ್ನೂ, ಪುರಪ್ರಮುಖರನ್ನೂ ನಿರ್ದಿಷ್ಟ ದಿನದಲ್ಲಿ ನಡೆಯುವ ಮಹಾಸಭೆಗೆ ಬರಬೇಕೆಂದು ಆಹ್ವಾನ ಕಳುಹಿಸಿದನು.

ಹಾಗೆಯೇ ಮಹಾ ಸಭೆಯೊಂದು ಸೇರಿತು. ಆ ಸಭೆಯವರ ಮುಂದೆ, ವೃದ್ಧನಾದ ಯಶೋವರ್ಧನ ರಾಜನು ತನ್ನ ಅಭಿಪ್ರಾಯವನ್ನು ಹೇಳಿದನು. ಅದನ್ನು ಕೇಳುತ್ತಿದ್ದಂತೆ ಸಭಿಕರನೇಕರ ಮುಖಗಳು ಕಹಿಗುಳಿಗೆ ಬಾಯಿಗೆ ಬಿದ್ದವರ ಹಾಗೆ ಆದುವು. ತನ್ನ ಇಷ್ಟದಂತೆ ಗುಣವರ್ಧನನಿಗೆ ಪಟ್ಟಾಭಿಷೇಕ ಮಾಡಲಿಕ್ಕೆ ಹಿರಿಯ ಮಗ ತಪೋವರ್ಧನನಿಂದ ಏನೂ ಅಭ್ಯಂತರ ಬರುವುದಿಲ್ಲವೆಂದು ಕೂಡಾ ಭರವಸೆ ಕೊಟ್ಟನು ಯಶೋವರ್ಧನ.

ದುರ್ಗುಣಗಳ ಹುತ್ತದಂತಿರುವ ಗುಣವರ್ಧನನು ರಾಜನಾಗುವುದು ಯಾರಿಗೂ ಇಷ್ಟವಿರಲಿಲ್ಲ.




ಆದರೂ ಆ ವಿಷಯವನ್ನು ರಾಜನೊಂದಿಗೆ ಹೇಳಲು ಪ್ರತಿಯೊಬ್ಬರಿಗೂ ಶಂಕೆ. ಎಲ್ಲರೂ ಹಿಂದೆ ಮುಂದೆ ನೋಡಿಕೊಂಡಿರುವಾಗ, ವೀರಪುರದ ಸಾಮಂತನಾದ ಸೂರ್ಯವರ್ಮನು ಧೈರ್ಯದಿಂದ ಸಭಾಮಧ್ಯದಲ್ಲಿ ಎದ್ದು ನಿಂತು, ಗುಣವರ್ಧನನ ದುಷ್ಟತನಗಳನ್ನು ಕುರಿತು ಹೇಳುತ್ತ, ಅವನು ರಾಜನಾಗಿರಲು ಸ್ವಲ್ಪವೂ ಅರ್ಹನಲ್ಲವೆಂದು, ಇನ್ನು ಅವನಿಗೆ ಒಳ್ಳೆಯ ಬುದ್ಧಿ ಬರಲು ಸಾಧ್ಯವಿಲ್ಲವೆಂದು ತನ್ನ ಅಭಿಪ್ರಾಯವನ್ನು ಹೇಳಿದನು.

ಅದನ್ನು ಕೇಳಿ ಸಭೆಯಲ್ಲಿದ್ದವರೆಲ್ಲಾ ಹರ್ಷಧ್ವನಿ ಮಾಡಿದರು. ಆಮೇಲೆ ಸೂರ್ಯವರ್ಮನು ಹೇಳಿದುದನ್ನು ಸಮರ್ಥಿಸಿ ಅನೇಕ ಮಂದಿ ಸಾಮಂತರು ಮಾತಾಡಿದರು. ಕೆಲವರು ಯಶೋವರ್ಧನನೇ ಇನ್ನಷ್ಟು ಕಾಲ ರಾಜನಾಗಿರಬೇಕೆಂದು ಆಶಿಸಿದರು. ಆ ಸಮಯದಲ್ಲಿ ತಪೋವರ್ಧನನಿಗೆ ರಾಜಕಾರ್ಯಗಳಲ್ಲಿ ಆಸಕ್ತಿ ಬರುವಂತೆ ಪ್ರಯತ್ನಿಸ

ಬೇಕೆಂದೂ ಸಲಹೆ ಮಾಡಿದರು. ಮುಖ್ಯವಾಗಿ ಯಶೋವರ್ಧನನನ್ನು ರಾಜ್ಯ ಕಾರ್ಯಗಳಿಗೆ ಮನಸ್ಸು ಹೊರಳಿಸಿಬಿಟ್ಟರೆ, ಅವನಷ್ಟು ಒಳ್ಳೆಯ ರಾಜನು ಬೇರೆ ಯಾರೂ ಇರಲಾರರೆಂದು ಕೆಲವರು ಹೇಳಿದರು.

ಇದನ್ನೆಲ್ಲ ಕೇಳಿದ ಮೇಲೆ ಯಶೋವರ್ಧನನು ಗಲಿಬಿಲಿಗೆ ಬಿದ್ದನು. ಏನೂ ತೋರದಂತಾದನು. ಇಷ್ಟೊಂದು ಸಾಮಂತರನ್ನೂ ಹಿರಿಯರನ್ನೂ ವ್ಯತಿರೇಕಿಸಿ, ತಾನು ಚಿಕ್ಕವನನ್ನೇ ರಾಜನೆಂದು ಪ್ರಕಟಿಸಿಬಿಟ್ಟರೆ ದೇಶದೊಳಗೆ ಅಂತರ್ಯುದ್ಧ ಏಳದಿರದು. ಆಗ ತನ್ನ ಸಾಮಂತರೊಳಗೆ ಬಲಿಷ್ಠನೂ ಪ್ರಭಾವಶಾಲಿಯೂ ಆದ ಸೂರ್ಯವರ್ಮನು ಬಂಡಾಯವೇಳುವವರಿಗೆ ನಾಯಕನೂ ಆದಾನು. ಪ್ರಸ್ತುತದಲ್ಲಿ ದೇಶದೊಳಗೆ ಶಾಂತಿಯನ್ನು ಕಾಪಾಡಬೇಕಾದರೆ ತಾನು ರಾಜ್ಯ ಪರಿತ್ಯಾಗ ಮಾಡುವ ಆಲೋಚನೆಯನ್ನು ಬಿಟ್ಟಿರುವುದಾಗಿ ಪ್ರಕಟಿಸುವುದೊಂದೇ ಸರಿಯಾದ ಮಾರ್ಗವೆಂದು ಅವನಿಗೆ ತೋರಿತು. "ಸರಿ, ಪ್ರಸ್ತುತ ನಾನೇ ರಾಜ್ಯಭಾರ ನಿರ್ವಹಿಸಿಕೊಂಡಿರುತ್ತೇನೆ. ಮುಂದೆ ನೋಡೋಣ" ಎಂದು ಹೇಳಿ ಸಭೆಯನ್ನು ಮುಗಿಸಿದನು. ಸಭಿಕರೆಲ್ಲಾ ಆನಂದವನ್ನು ಧ್ವನಿಸಿದರು,

ಸಭೆ ಮುಗಿಸಿದ ಮೇಲೆ ಯಶೋವರ್ಧನನು ತನ್ನ ಮಂತ್ರಿಯನ್ನು ಕರೆದುಕೊಂಡು ನೇರಾಗಿ ಉದ್ಯಾನವನಕ್ಕೆ ಹೋದನು. ಅಲ್ಲಿ ಮಂತ್ರಿಯೊಡನೆ ಅದೇ ವಿಷಯವನ್ನು ಪ್ರಸ್ತಾಪಿಸಿದಾಗ, ಮಂತ್ರಿ ಯೋಚಿಸಿ, ಯಾವುದಕ್ಕೂ ಸೂರ್ಯವರ್ಮನೊಂದಿಗೆ ಏಕಾಂತದಲ್ಲಿ ಈ ವಿಷಯ ಮಾತಾಡುವುದು ಒಳ್ಳೆಯದೆಂದು ಸೂಚಿಸಿದನು.

ಸಾಮಂತರಲ್ಲಿ ಅವನು ಬಲಿಷ್ಠನಾದುದರಿಂದ ಅವನನ್ನು ರಾಜನು ತನ್ನ ಮಾತಿಗೆ ಒಪ್ಪುವಂತೆ ಮಾಡಿಬಿಟ್ಟರೆ, ಎಲ್ಲವೂ ಸುಗಮವಾಗಿ ಹೋಗುತ್ತದೆಂದು ಮಂತ್ರಿಯ ಅಭಿಪ್ರಾಯವಾಗಿತ್ತು.

ಅದರಂತೆ ಸೂರ್ಯವರ್ಮನನ್ನು ಉದ್ಯಾನಕ್ಕೆ ಕರೆಯಿಸಲಾಯಿತು. ಯಶೋವರ್ಧನನು ಅವನನ್ನು ಗೌರವ ವಿಶ್ವಾಸಗಳಿಂದ ಕರೆದು ತನ್ನ ಪಕ್ಕದ ಆಸನ



ದಲ್ಲಿ ಕೂಡಿಸಿ, "ಸೂರ್ಯವರ್ಮಾ, ನೀನು ಈ ದಿನದ ಸಭೆಯಲ್ಲಿ ನಿರ್ಭಯವಾಗಿ ಹೊರಪಡಿಸಿದ ಅಭಿಪ್ರಾಯಕ್ಕೆ, ನಾನು ಏಕೀಭವಿಸಲಾರದೆ ಹೋದರೂ ನಿನ್ನ ಧೈರ್ಯವನ್ನು ಮೆಚ್ಚಿಕೊಳ್ಳುತ್ತೇನೆ. ವೀರಪುರದ ಸಾಮಂತರಾಜರು ಯಾವಾಗಲೂ ಪ್ರಭುಭಕ್ತಿ ಪರಾಯಣರೆಂದು ನನಗೆ ಗೊತ್ತಿದೆ. ಗುಣವರ್ಧನ ಕುಮಾರನು ಇನ್ನೂ ಚಿಕ್ಕವನು. ಇನ್ನೂ ಹೊಣೆಯರಿಯದವನು, ವಯಸ್ಸಿಗೆ ತಕ್ಕ ಹಾಗೆ ಸ್ವೇಚ್ಛಾಚಾರಿಯಾಗಿಯೂ ಇರಬಹುದು. ಆದರೆ ನಿನ್ನಂತಹ ಅನುಭವಜ್ಞರ ಆಶ್ರಯವೂ, ಸಹಾಯವೂ ಇದ್ದರೆ ಅವನು ಒಳ್ಳೆಯ ಪರಿಪಾಲಕನಾಗಬಹುದೆಂದು ನನ್ನ ಅಭಿಪ್ರಾಯ" ಎಂದನು.

"ಮಹಾರಾಜರೇ, ಧರ್ಮಾಧರ್ಮಗಳ ತಾರತಮ್ಯ ತಿಳಿಯದವನೂ, ಸಾಧುಶೀಲನೂ ಆದ ತಪೋವರ್ಧನನು ಯುವರಾಜನೆಂದು ಎಲ್ಲರೂ ತಿಳಿದುಕೊಂಡಿರುವಾಗ, ನೀವು ರಾಜ್ಯವನ್ನು ಇನ್ನೊಬ್ಬನಿಗೆ ಕೊಡಲು ನೋಡುವುದು. ಪ್ರಜೆಗಳ ದೃಷ್ಟಿಗೆ ಅನ್ಯಾಯವೆಂದೇ ತೋರುತ್ತದೆ" ಎಂದನು ಸೂರ್ಯವರ್ಮ.

"ತಪೋವರ್ಧನನು ಲೌಕಿಕ ವ್ಯವಹಾರಗಳಲ್ಲಿ ಆಸಕ್ತಿಯುಳ್ಳವನಲ್ಲ. ಅಂಥವನು ರಾಜನಾಗಿದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ಅಂದರೆ ರಾಜ್ಯವು ಅರಾಜಕವೇ ಆಗುತ್ತದೆ" ಎಂದನು ಯಶೋವರ್ಧನ.

"ಪ್ರಭುಗಳೇ, ಅವನಿಗೆ ಲೌಕಿಕ ವಿಷಯಗಳಲ್ಲಿ ಆಸಕ್ತಿ ಬರುವ ಹಾಗೆ ಮಾಡಲು ಅಷ್ಟೇನೂ ಕಷ್ಟವಿಲ್ಲ. ಜ್ಯೇಷ್ಠ ರಾಜಪುತ್ರನಾಗಿ ಜನಿಸಿದ ಅವನ ಬಾಧ್ಯತೆಗಳನ್ನು ಅವನಿಗೆ ತಿಳಿಯಪಡಿಸಿದರೆ, ಅವನು ತಪ್ಪದೆ ರಾಜ್ಯಭಾರ ನಿರ್ವಹಿಸುವಷ್ಟು ಸಮರ್ಥನಾಗುತ್ತಾನೆ." ಎಂದನು ಸೂರ್ಯವರ್ಮ.

ಯಶೋವರ್ಧನನು ಮಂತ್ರಿಯ ಮುಖವನ್ನು ನೋಡಿದನು. ಮಂತ್ರಿ ಸೂರ್ಯವರ್ಮನು ಹೇಳಿದ ಮಾತಿಗೆ ಹೌದೆಂಬಂತೆ ತಲೆಯಾಡಿಸಿದನು.

"ಹಾಗಾದರೆ ಒಂದು ಮಾಡೋಣ. ತಪೋವರ್ಧನನನ್ನು ಒಂದು ವರ್ಷದವರೆಗೆ ನಿನ್ನ ಸಂರಕ್ಷಣೆ






ಯಲ್ಲಿ ಇರಿಸುತ್ತೇನೆ. ಈ ಕಾಲದಲ್ಲಿ ಅವನಿಗೆ ಲೌಕಿಕ ವ್ಯವಹಾರಗಳಲ್ಲಿ ಆಸಕ್ತಿ ಬರುವ ಹಾಗೆ ಮಾಡಿ, ರಾಜನಿಗೆ ಅರ್ಹವಾದ ಕ್ಷಾತ್ರ ಗುಣಗಳು ಬರುವ ಹಾಗೆ ಮಾಡಬಲ್ಲೆಯಾ?" ಎಂದು ಕೇಳಿದನು ಯಶೋವರ್ಧನ ರಾಜ.

ಅದಕ್ಕೆ ಸೂರ್ಯವರ್ಮನು ತನ್ನ ಅಂಗೀಕಾರವನ್ನು ಹೇಳಿದನು. ಈಗ ತಾನು ಮುಂದಾಗಿ ವೀರಪುರಕ್ಕೆ ಹೋಗಿ, ಅಲ್ಲಿಯ ಪರಿಪಾಲನೆಯ ವ್ಯವಹಾರಗಳನ್ನು ತನ್ನ ಕುಮಾರನಾದ ಚಂದ್ರವರ್ಮನಿಗೆ ಒಪ್ಪಿಸಿ ಕೆಲವೇ ದಿನಗಳಲ್ಲಿ ಹಿಂದಿರುಗಿ ಬರುವುದಾಗಿ ಹೇಳಿದನು. ಇದಕ್ಕೆ ಯಶೋವರ್ಧನನ ಒಪ್ಪಿಗೆ ಸಿಕ್ಕಿತು.

ಸೂರ್ಯವರ್ಮನು ಯಶೋವರ್ಧನನಿಂದ ಅಪ್ಪಣೆ ಪಡೆದು ತನ್ನ ಬಿಡದಿಗೆ ಹೋದನು. ಆ ದಿನ ಸಾಯಂಕಾಲವೇ ಅವನು ತನ್ನ ನಗರಕ್ಕೆ ಹೋಗುವ ಸನ್ನಾಹಕ್ಕೆ ತೊಡಗಿದನು.

ಇಲ್ಲಿ ಸೂರ್ಯವರ್ಮನು ಹೊರಡುವ ಸನ್ನಾಹದಲ್ಲಿರುವಾಗ, ಅವನು ಹೋಗುವ ದಾರಿಯಲ್ಲಿ ಹೊಂಚು ಹಾಕಿ, ಅವನನ್ನು ಕೊಲೆ ಮಾಡಲು ಮತ್ತೊಂದು ಪ್ರದೇಶದಲ್ಲಿ ರಹಸ್ಯವಾಗಿ ಏರ್ಪಾಡುಗಳು ನಡೆಯುತ್ತಿದ್ದುವು. ಸರ್ಪಕೇತು ಎಂಬ ಇನ್ನೊಬ್ಬ ಸಾಮಂತ ರಾಜನೇ ಅದಕ್ಕೆ ನಾಯಕನು. ವೀರಪುರದ ಎಲ್ಲೆಯಲ್ಲೇ ಅವನ ರಾಜ್ಯವಿದ್ದಿತು. ಹೇಗಾದರೂ ತಾನು ವೀರಪುರವನ್ನು ವಶಪಡಿಸಿಕೊಳ್ಳಬೇಕೆಂದು ಅವನು ಬಹಳ ಕಾಲದಿಂದ ಮಸಲತ್ತು ಮಾಡಿಕೊಂಡಿದ್ದನು. ಅದಕ್ಕೆ ತಕ್ಕ ಸಮಯ ಒದಗಿ ಬಂದಿರಲಿಲ್ಲ. ಈಗ ಅವನು ಯಶೋವರ್ಧನನ ಚಿಕ್ಕ ಮಗನಾದ ಗುಣವರ್ಧನನನ್ನು ಕಲೆತು, ತನ್ನ ಪಕ್ಷಕ್ಕೆ ಅವನನ್ನು ತಿರುಗಿಸಿಕೊಳ್ಳುವುದರಲ್ಲಿ ವಿಜಯಿಯಾದನು. ಆದರಿಂದ ಮುಂದಿನ ಕಾರ್ಯಗಳೆಲ್ಲ ಸುಲಭವಾಗುವುದೆಂದು ಅವನ ನಂಬುಗೆ.

ತಂದೆ ತನ್ನನ್ನು ರಾಜನನ್ನಾಗಿ ಮಾಡುವೆನೆಂದರೆ ಅದನ್ನು ವ್ಯತಿರೇಕಿಸಿದವನು ಸೂರ್ಯವರ್ಮನೆಂದು ತಿಳಿದು ಗುಣವರ್ಧನನಿಗೆ ಸೂರ್ಯವರ್ಮನ ಮೇಲೆ ಕೋಪದ ಉರಿ ಏಳತೊಡಗಿತ್ತು. ಅವನ ಆಶ್ರಯ ಬೇಕೆನ್ನುವ ಅನೇಕ ಸಾಮಂತರು ಅವನನ್ನು ಸಮರ್ಥಿಸಿಕೊಂಡು ಮಾತನಾಡಿದಾಗ ಉರಿಯುವ ಬೆಂಕಿಗೆ ಎಣ್ಣೆ ಸುರಿದ ಹಾಗಾಯಿತು. ಆದರೆ ತಾನು ಒಬ್ಬಂಟಿಗನಾಗಿ ಅಷ್ಟು ಮಂದಿಗಳನ್ನು ಇದಿರಿಸಲು ಸಾಧ್ಯವಿಲ್ಲ. ತನ್ನ ಗುಂಪಿನಲ್ಲಿರುವ ಮಿತ್ರರಲ್ಲಿ ಅಷ್ಟೊಂದು ಧೈರ್ಯ ಸಾಹಸಗಳುಳ್ಳವರು ಯಾರೂ ಇಲ್ಲ.

ಗುಣವರ್ಧನ ಕುಮಾರನು ಸೂರ್ಯವರ್ಮನ ಮೇಲೆ ಹಗೆ ತೀರಿಸಿಕೊಳ್ಳುವುದು ಹೇಗೆಂದು ಹಲ್ಲು ಕಡಿದು ತಳಮಳಿಸಿಕೊಂಡಿರುವಾಗ, ಧೂರ್ತನಾದ ಸರ್ಪಕೇತು ಅವನನ್ನು ನೋಡಲು ಬಂದನು.

ಅವನು ಗುಣವರ್ಧನನೊಂದಿಗೆ, "ನಿನ್ನ ತಂದೆ ಒಳ್ಳೆಯ ಆಲೋಚನೆ ಮಾಡಿದರೆ, ರಾಜ್ಯವನ್ನು ಸನ್ಯಾಸಿಯಂಥ ನಿನ್ನ ಅಣ್ಣನಿಗೇ ಕೊಡಬೇಕೆಂದು ಹೇಳುವನಲ್ಲ, ಸೂರ್ಯವರ್ಮ?" ಎಂದು ಪ್ರಾರಂಭಿಸಿ, ತನ್ನ ಭಾವನೆಗಳಿಗೆ ಸರಿಯಾಗಿ ಅವನ ಭಾವನೆ ಇರುವುದನ್ನು ತಿಳಿದುಕೊಂಡನು. ಮತ್ತೇನು? ಗುಣವರ್ಧನನಿಗೆ ಒಳ್ಳೆಯ ಬಲವೇ ಸಿಕ್ಕಿದಂತಾಯಿತು. ಆ ದಿನ ಕೆಲವೇ ಮಂದಿ ಅಂಗರಕ್ಷಕರೊಂದಿಗೆ ವೀರಪುರಕ್ಕೆ ಹೋಗುವ ಸೂರ್ಯವರ್ಮನನ್ನು ಫಕ್ಕನೆ ಇದಿರಿಸಿ ಕೊಲ್ಲುವುದು ಸುಲಭವೆಂದು ಸರ್ಪಕೇತು ಹೇಳಿದನು. ಅದಕ್ಕೆ ಸಾಕಷ್ಟು ಬಲವು ತನಗಿದೆಯೆಂದೂ ಭರವಸೆ ನೀಡಿದನು ಸರ್ಪಕೇತು.




"ನೀವು ಈ ಕೆಲಸವನ್ನು ಜಯಪ್ರದವಾಗಿ ಮುಗಿಸಿಬಿಟ್ಟರೆ ಎಂದೋ ಒಂದು ದಿನ ಸರಿಯಾದ ಸಂದರ್ಭದಲ್ಲಿ ನಿಮಗೆ ಬೇಕಾದ ಸಹಾಯ ನಾನು ಮಾಡುತ್ತೇನೆ. ಬಲವಂತನಾದ ಸೂರ್ಯವರ್ಮನ ಆತಂಕವೊಂದು ಹೋಗಿಬಿಟ್ಟರೆ ನಾನು ರಾಜನಾಗುವುದು ನಿಜ! ಆಮೇಲೆ ನನ್ನ ಮುಖ್ಯ ಸಹಕಾರ ನಿಮಗೇ!" ಎಂದನು ಗುಣವರ್ಧನ.

"ನೀನೇ ಮಹಾರಾಜನಾಗುವುದರಲ್ಲಿ ಸಂದೇಹವೇ ಇಲ್ಲ. ಹೀಗೇ ಆಗುವುದೆಂದು ಊಹಿಸಿಕೊಂಡೇ ನಾನು ಸೂರ್ಯವರ್ಮನ ರಾಜ್ಯವನ್ನು ಆಕ್ರಮಿಸಿಕೊಳ್ಳಲು ಬೇಕಾದ ವ್ಯೂಹಗಳನ್ನು ಆಲೋಚಿಸಿಟ್ಟಿದ್ದೇನೆ. ಅವನ ಮರಣವಾರ್ತೆ ತಿಳಿದ ಕೂಡಲೇ, ನನ್ನ ಸೈನ್ಯವು ಆ ರಾಜ್ಯದ ಮೇಲೆ ಬಿದ್ದು ಆಕ್ರಮಿಸಿಕೊಳ್ಳುತ್ತದೆ. ಅದಕ್ಕೆ ಸೂರ್ಯವರ್ಮನ ಮಗ ಚಂದ್ರವರ್ಮನು ದೊಡ್ಡ ಆತಂಕದ ಬಾಬತ್ತಿನವನಲ್ಲ. ನನ್ನ ಸೈನಿಕರೆಲ್ಲಾ ಸಾಧಾರಣ ಪೌರರ ಹಾಗೆ ಉಡುಗೆ ಧರಿಸಿ ವೀರಪುರದ ಕೋಟೆಯನ್ನು ಆಕ್ರಮಿಸಿಕೊಳ್ಳುತ್ತಾರೆ. ಯಶೋವರ್ಧನ ಮಹಾರಾಜರಿಗೆ ಅದೆಲ್ಲಾ ಕ್ರೂರನಾದ ಸೂರ್ಯವರ್ಮನ ಮೇಲಿನ ಕೋಪದಿಂದ ಪ್ರಜೆಗಳೇ ಬಂಡಾಯವೆದ್ದು ತಿರುಗಿ ಬೀಳುವ ಹಾಗೆಯೇ ಅನಿಸುವಂತೆ ಇರುತ್ತದೆ. ಆ ವಿಷಯದಲ್ಲಿ ನನ್ನ ಸೈನಿಕರು ಬಹು ಜಾಗರೂಕರಾಗಿರುತ್ತಾರೆ" ಎಂದನು ಸರ್ಪಕೇತು.

"ಒಳ್ಳೆಯದು. ಅದಕ್ಕೆ ಬೇಕಾದ ಸಹಾಯವನ್ನು ನಾನೂ ಮಾಡುತ್ತೇನೆ. ಸೂರ್ಯವರ್ಮನು ಗೋಮುಖ ವ್ಯಾಘ್ರದಂಥವನೆಂದೂ, ಪ್ರಜಾಕಂಟಕನೆಂದೂ ತಂದೆಯೊಡನೆ ಸಮಯ ನೋಡಿ ಹೇಳುತ್ತೇನೆ. ಅವನ ಕೊಲೆ ವೀರಪುರದ ಸರಿಹದ್ದಿನಲ್ಲೇ ನಡೆಯುವುದರಿಂದ ಅದು ಇನ್ನೂ ಬಲಪಡುತ್ತದೆ. ಬಹು ಸುಲಭವಾಗಿ ನಮ್ಮ ಸಮಸ್ಯೆ ತೀರುತ್ತದೆ" ಎಂದನು ಗುಣವರ್ಧನ.

ಸರ್ಪಕೇತುವಿಗೆ ಬಹಳ ಉತ್ಸಾಹವಾಯಿತು. ಬಹು ಬಲಿಷ್ಠನೂ, ಧೈರ್ಯಶಾಲಿಯೂ ಆದ ಸೂರ್ಯವರ್ಮನು ಸತ್ತುಬಿಟ್ಟರೆ ಗುಣವರ್ಧನನನ್ನು

ಮಾಹಿಷ್ಮತೀ ನಗರಕ್ಕೆ ರಾಜನನ್ನಾಗಿ ಮಾಡುವುದು ಸುಲಭ. ಸೂರ್ಯವರ್ಮನು ತೀರಿಹೋದ ಮೇಲೆ ವೀರಪುರವನ್ನು ತನ್ನ ರಾಜ್ಯದೊಂದಿಗೆ ಸೇರಿಸುವುದು ಬೆಣ್ಣೆ ನುಂಗುವಷ್ಟು ಸುಲಭ. ಆಗ ತನಗೆ ಮಾಹಿಷ್ಮತಿಯಲ್ಲಿಯೂ ದೊಡ್ಡ ಪ್ರಭಾವ ಬಂದು ಬಿಡುತ್ತದೆ.

ಹೀಗೆ ಘಾತುಕವಾದ ಒಳಸಂಚಿನ ಬಲೆಯನ್ನು ರಚಿಸಿಕೊಂಡು ಸರ್ಪಕೇತು ಅವಸರವಸರವಾಗಿ ತನ್ನ ಅನುಚರರೊಂದಿಗೆ, ಬಹುಬೇಗನೇ ರಾಜಧಾನಿಯನ್ನು ಬಿಟ್ಟು, ವೀರಪುರದ ಸರಿಹದ್ದಿನ ಕಡೆಗೆ ಓಡಿದನು. ಅಲ್ಲಿ ಒಂದುಕಡೆ ಅಡಗಿಕೊಂಡಿದ್ದು, ಸೂರ್ಯವರ್ಮನ ಬರುವಿಕೆಯನ್ನು ಕಾಯುತ್ತಿದ್ದನು.

ಸೂರ್ಯವರ್ಮನಿಗೆ ತನ್ನ ಮೇಲೆ ಹೀಗೊಂದು ದುಸ್ತಂತ್ರ ನಡೆಯುವುದೆಂದು ಸ್ವಲವೂ ಗೊತ್ತಿರಲಿಲ್ಲ. ಅವನು ಕೆಲವೇ ಮಂದಿ ಸೇವಕರೇ ಮೊದಲಾದ ಅನುಚರರೊಂದಿಗೆ ಸಾಯಂಕಾಲದ ಹೊತ್ತಿನಲ್ಲಿ ತನ್ನ ರಾಜ್ಯದ ಕಡೆಗೆ ಹೊರಟನು. ಮಧ್ಯರಾತ್ರಿಯ ಹೊತ್ತಿಗೆ ದಾರಿಯಲ್ಲಿ ಒಂದು ಕಡೆ ಮಜಲೀ ಬಿಟ್ಟು, ಬೆಳಗಾದ ಕೂಡಲೇ ಮತ್ತೆ ಪ್ರಯಾಣ ಮುಂದುವರಿಸಿದನು.

ಆ ದಿನ ಮತ್ತೆ ಸಾಯಂಕಾಲವಾಗುವ ಹೊತ್ತಿಗೆ ಸೂರ್ಯವರ್ಮನು ತನ್ನ ರಾಜ್ಯದ ಗಡಿಯನ್ನು ಮುಟ್ಟಿದನು. ಅದು ಗುಡ್ಡಬೆಟ್ಟಗಳ ಪ್ರಾಂತ. ಆದರೆ ಯಾವ ಅಪಾಯದ ಶಂಕೆಯೂ ಇಲ್ಲದ ಸೂರ್ಯವರ್ಮನು ತನ್ನ ಕುದುರೆಯನ್ನು ಮುಂದೆ ನಡೆಸುತ್ತ, ತನ್ನ ಕುಮಾರನಿಗೆ ಒಪ್ಪಿಸಬೇಕಾದ ಹೊಸ ಬಾಧ್ಯತೆಗಳನ್ನು ಕುರಿತು ಆಲೋಚಿಸಿಕೊಂಡಿದ್ದನು.

ಹಠಾತ್ತಾಗಿ ಗುಡ್ಡದ ಕಡೆಯಿಂದ ಚಿಕ್ಕ ಚಿಕ್ಕ ಲಟಪಟ ಧ್ವನಿ ಕೇಳತೊಡಗಿತು. ಸೂರ್ಯವರ್ಮನು ತಟ್ಟನೆ ತನ್ನ ಕುದುರೆಯನ್ನು ನಿಲ್ಲಿಸಿ, ತನ್ನ ಅನುಚರರ ಕಡೆಗೆ ನೋಡಿದನು. ಆಗ ಅವರ ಹಿಂಗಡೆಯಲ್ಲಿ ಮರಗಳಾಚೆಯಿಂದ, ಸಾಮಾನ್ಯ ಪುರಜನರ ಹಾಗೆ ಕಾಣುವ ಅನೇಕರು ಆಯುಧಧಾರಿಗಳಾಗಿ ಕುದುರೆಗಳ ಮೇಲೆ ದೌಡಾಯಿಸಿಕೊಂಡು ಅರಚುತ್ತ ಒಮ್ಮೆಗೇ ಸೂರ್ಯವರ್ಮನ ಗುಂಪಿನವರ ಮೇಲೆ ಬಿದ್ದರು. ಸೂರ್ಯವರ್ಮನ ಕೈಯಲ್ಲಿ ಅಷ್ಟರೊಳಗೇ ಕತ್ತಿ ಮಿಂಚಿ ಕುಣಿಯಿತು. ಅವನು ಮುಂದೆ ಬರುವುದರೊಳಗೇ ತನ್ನ ಅನುಚರರಿಂದ ಬೇರ್ಪಟ್ಟುಹೋದನು. ಹತ್ತು ಹನ್ನೆರಡು ಮಂದಿ ಆಯುಧಧಾರಿಗಳು ಒಂದೇ ಬಾರಿಗೆ ಕತ್ತಿಗಳನ್ನು ಝಳಪಿಸುತ್ತ ಕೊಲೆ ಹುರುಪಿನಿಂದ ಕರ್ಣಕರ್ಕಶವಾಗಿ ಅರಚಿಕೊಂಡು ಅವನ ಮೇಲೆ ಮುಗಿಬಿದ್ದರು. (ಇನ್ನೂ ಇದೆ)






# ಮದುವೆ ಸಂಬಂಧ

ಕೇಳಿ ಕೇಳಿ ರಾಜಾ ತ್ರಿವಿಕ್ರಮನಿಗೇ ಕಥೆ ಕೇಳುವ ಕುತೂಹಲದಿಂದ ಯಾವ ಶ್ರಮವೂ ಇಲ್ಲದಂತಾಯಿತೋ ಎಂಬ ಹಾಗೆ ಮತ್ತೆ ಮರದ ಬಳಿಗೆ ಹಿಂದಿರುಗಿದ ತ್ರಿವಿಕ್ರಮನು, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹೇರಿಕೊಂಡು, ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯುತೊಡಗಿದನು, ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನಿನ್ನ ಪ್ರಯತ್ನವು ಪ್ರತಿ ಸಾರಿಯೂ ವಿಫಲವಾಗುತ್ತಿದ್ದರೂ, ನೀನು ವಿರಮಿಸದಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಇಂತಹ ರಾತ್ರಿಯ ಹೊತ್ತಿನಲ್ಲಿ ಯಾರೋ ನಿನ್ನನ್ನು ಸ್ಮಶಾನಕ್ಕೆ ಕಳುಹಿಸಿ ನಿನ್ನ ರಾಜಪದವಿಯನ್ನು ಅವಮಾನಪಡಿಸುವರೆಂದು ನನಗೆ ತೋರುತ್ತದೆ. ನಿಜವನ್ನು ತಿಳಿದುಕೊಂಡು ನೀನು ಮತ್ತೆ ಅವರನ್ನೇ ಅವಮಾನಪಡಿಸಲು ಸಂದರ್ಭ ದೊರಕಿದಾಗ ಉದಾರಗುಣವನ್ನೇ ತೋರಿಸುವಿಯೋ, ಅಲ್ಲ ಪ್ರತೀಕಾರ ಮಾಡುವಿಯೋ ಗೊತ್ತಾಗುವುದಿಲ್ಲ. ಇದಕ್ಕೆ ಉದಾಹರಣೆಯಾಗಿ ರತ್ನಪಾದನೆಂಬವನ ಕಥೆ ಹೇಳುತ್ತೇನೆ, ಕೇಳು.

ಬೇತಾಳಕಥೆಗಳು?..



ದಾರಿಯ ಶ್ರಮವಾದರೂ ಮರೆಯಬಹುದು" ಎಂದು ಕಥೆ ಹೇಳಲು ಪ್ರಾರಂಭಿಸಿತು:

ರತ್ನಪಾದನು ಗೋಪವಾಡಿ ಎಂಬ ಊರಿನಲ್ಲಿ ಹಂಸಪಾದನೆಂಬ ಸಣ್ಣ ರೈತನೊಬ್ಬನ ಮಗ, ಅವನು ಆ ಊರಿನಲ್ಲಿರುವ ಒಂದು ಶಾಲೆಯಲ್ಲಿ ಸ್ವಲ್ಪ ಓದು ಬರೆಹ ಕಲಿತು ಸ್ವಲ್ಪ ಹೆಚ್ಚಿನ ಬುದ್ಧಿವಂತನೆನಿಸಿಕೊಂಡನು. ಅಷ್ಟು ಮಾತ್ರದಿಂದ ಅವನ ವಿದ್ಯಾದಾಹವು ತೀರಿರಲಿಲ್ಲ. ಆದುದರಿಂದ ಅವನು ದೂರ ಪ್ರಾಂತಕ್ಕೆ ಹೋಗಿ ಅನೇಕ ಮಂದಿ ಗುರುಗಳನ್ನು ಆಶ್ರಯಿಸಿ ಅನೇಕ ಬಗೆಯ ವಿದ್ಯೆಗಳನ್ನು ಕಲಿತು ಪಂಡಿತನೆನಿಸಿಕೊಂಡ ಮೇಲೆ ತೃಪ್ತನಾಗಿ ಮನೆಗೆ ಹಿಂದಿರುಗಿ ಬಂದನು.

ಊರೊಳಗೆ ಅವನ ಪಾಂಡಿತ್ಯವನ್ನು ಕುರಿತು ಅನೇಕರು ಮಾತಾಡಿಕೊಳ್ಳುತ್ತಿದ್ದರು. ಬಾಯಿಯಿಂದ ಬಾಯಿಗೆ ಹೋದ ಆ ಮಾತು ರಾಜನ ಕಿವಿಗೆ ಬಿದ್ದಿತು. ಅಂಥವನು ತನ್ನ ಆಸ್ಥಾನದಲ್ಲಿ ಇದ್ದರೆ ಅಲಂಕಾರಪ್ರಾಯವೆಂದು ರಾಜನಿಗೆ ತೋರಿತು. ಕೂಡಲೇ ರಾಜನು ಅವನು ಆಸ್ಥಾನಕ್ಕೆ ಬಂದರೆ, ಸಾವಿರ ವರಹ ಸಂಬಳದ ಮೇಲೆ ಅವನನ್ನು ಉದ್ಯೋಗದಲ್ಲಿರಿಸಿಕೊಳ್ಳುವುದಾಗಿ ವರ್ತಮಾನ ಕಳುಹಿಸಿದನು.

ಕೇವಲ ಸಾಧಾರಣ ರೈತನಾಗಿರುವ ತನ್ನ ಮಗನಿಗೆ ರಾಜಾಸ್ಥಾನದಲ್ಲಿ ಉದ್ಯೋಗ ದೊರಕುವ ಸಂಗತಿ ಕೇಳಿ ತನಗೂ ಊರೊಳಗೆ ಗೌರವವೇರುವುದೆಂದು ಹಂಸಪಾದನಿಗೆ ಬಹಳ ಸಂತೋಷವಾಯಿತು.

ಅವನು ರತ್ನಪಾದನೊಂದಿಗೆ, "ನಿನ್ನಂಥ ಮಗನನ್ನು ಪಡೆದು ನಾನು ಪುಣ್ಯವಂತನಾದೆನು. ನೀನು ಕಷ್ಟಪಟ್ಟು ಓದಿ ಒಳ್ಳೆಯ ಪಂಡಿತನಾಗಿರುವೆ. ನೀನು ಕೇಳದೆಯೇ ರಾಜನವರೆಗೆ ನಿನ್ನ ಪ್ರಭಾವ ಹೋಗಿದೆ. ನೀನು ಮದುವೆ ಮಾಡಿಕೊಂಡು ಒಬ್ಬ ಗೃಹಸ್ಥನೆನಿಸಿಬಿಟ್ಟರೆ ನನಗೆ ಯಾವ ಚಿಂತೆಯೂ ಇಲ್ಲ. ನೀನು ಸರಿಯೆಂದರೆ ಸಾಕು, ನಿನಗೆ ತಕ್ಕ ಕನ್ಯೆಯನ್ನು ನೋಡುತ್ತೇನೆ. ಮದುವೆ ಮಾಡಿಕೊಂಡೇ ರಾಜಧಾನೀ ನಗರಕ್ಕೆ ಹೋಗಿ ಸಂಸಾರ ಹೂಡಿ ಸುಖವಾಗಿರಪ್ಪ" ಎಂದನು.

ಅಷ್ಟು ಬೇಗ ಮದುವೆ ಮಾಡಿಕೊಳ್ಳಲು ರತ್ನಪಾದನಿಗೆ ಇಷ್ಟವಿರಲಿಲ್ಲ. ಕಡೆಗೆ ತಂದೆಯ ಒತ್ತಾಯವನ್ನು ಮೀರಲಾಗದೆ ಸರಿ ಎಂದನು.

ಹಂಸಪಾದನ ಮನೆಯ ಸಮೀಪದಲ್ಲಿ ಗೋಪೀನಾಥನೆಂಬೊಬ್ಬ ಧನಿಕನ ಭವನವಿದ್ದಿತು. ಅವನು ವ್ಯಾಪಾರದಲ್ಲಿ ಲಕ್ಷಗಟ್ಲೆ ಸಂಪಾದಿಸಿ ದೊಡ್ಡ ಧನಿಕನಾಗಿದ್ದನು. ಹಂಸಪಾದನೊಂದಿಗೆ ಅವನಿಗೆ ದೂರದ ಬಂಧುತ್ವವೂ ಇದ್ದಿತು. ಚಿಕ್ಕಂದಿನಿಂದಲೇ ಪಳಗಿದ ಸ್ನೇಹವೂ ಇದ್ದಿತು.

ಪ್ರಸ್ತುತ ಗೋಪೀನಾಥನಿಗೆ ಮದುವೆಯ ವಯಸ್ಸಿಗೆ ಬಂದ ಮಗಳಿದ್ದಳು. ಅವಳು ಸುಂದರಿಯಾಗಿ, ಕೆಲಸ ಕಾರ್ಯಗಳಲ್ಲಿ ಒಳ್ಳೆಯ ಚುರುಕಿನವ

ಳಾಗಿ, ವಿನಯಗುಣ ಉಳ್ಳವಳಾಗಿ ಒಟ್ಟಿನಲ್ಲಿ ಚಿನ್ನಾಗಿದ್ದಳು. ಅವಳನ್ನು ತನ್ನ ಮಗನಿಗೆ ತಂದುಕೊಳ್ಳಬೇಕೆಂದು ಬಹಳ ಕಾಲದಿಂದ ಹಂಸಪಾದನ ಮನಸ್ಸಿನೊಳಗಿತ್ತು.

ಈಗ ಮಗನು ಮದುವೆ ಮಾಡಿಕೊಳ್ಳಲು ತನ್ನ ಅಂಗೀಕಾರ ತಿಳಿಸಿದ ಮೇಲೆ ಅವನು ಗೋಪೀನಾಥನ ಮನೆಗೆ ಹೋಗಿ ತನ್ನ ಮಗನ ವಿಷಯವನ್ನು ಹೇಳಿ ಕನ್ಯೆಯನ್ನು ಕೇಳಿದನು. ಆದರೆ ಅವನ ನಂಬುಗೆ ಹುಸಿಹೋಯಿತು.

ಅದನ್ನು ಕೇಳಿ ಗೋಪೀನಾಥನು ಬೆರಗಾಗಿ, "ಮಿತ್ರಾ, ನಮ್ಮ ನಡುವೆ ಯಾವುದೋ ದೂರದ ಬಾದರಾಯಣ ಸಂಬಂಧವಿದ್ದಿರಬಹುದು. ಮದುವೆಯ ಸಂಬಂಧಕ್ಕೆ ಅದಷ್ಟೇ ಮುಖ್ಯವಾಗದು. ನನ್ನ ಮಗಳನ್ನು ಒಳ್ಳೆಯ ಸ್ಥಿತಿವಂತನಾದವನಿಗೇ ಕೊಡಬೇಕೆಂದಿದ್ದೇನೆ. ಹಾಗೆ ಮಾಡದಿದ್ದರೆ ನನಗಿರುವ ಒಬ್ಬಳೇ ಮಗಳಿಗೆ ನಾನು ಅನ್ಯಾಯ ಮಾಡಿದಂತಾದೀತು. ಎಲ್ಲರೂ ನನ್ನನ್ನು ಹಳಿಯಲೂ ಬಹುದು. ನನ್ನನ್ನೊಬ್ಬ ಮಂಕನೆಂತಲೂ ಹೇಳಿಯಾರು. ಈ ವಿಷಯದಲ್ಲಿ ವ್ಯತ್ಯಾಸವಾಗಿ ತಿಳಿಯಬೇಡ. ಕ್ಷಮಿಸು" ಎಂದನು.

ಅವನ ಮಾತು ಕೇಳಿ ಹಂಸಪಾದನು ಸಣ್ಣ ಮೋರೆ ಮಾಡಿಕೊಂಡು, "ನನ್ನ ಮಗನ ಸಂಗತಿ ಪೂರಾ ನಿನಗೆ ಗೊತ್ತಿದೆ. ಅವನಲ್ಲಿ ಯಾವ ಕೊರತೆ ಇದೆ? ರಾಜಾಶ್ರಯ ಕೂಡಾ ಅವನಿಗೆ ಸಿಕ್ಕಿದೆ. ಅವನಿಗಿರುವ ಪಾಂಡಿತ್ಯದಿಂದ ಮುಂದೆ ಅವನು ಉಚ್ಚಸ್ಥಿತಿಗೆ ಬಾರದಿರಲಿಕ್ಕೇ ಇಲ್ಲ. ನಿನ್ನ ಮಗಳಿಗೆ ಯಾವ ಕೊರತೆಯೂ ಬಾರದು" ಎಂದನು.

"ನಾನು ಖಂಡಿತ ಹೇಳುವೆನೆಂದು ನೊಂದುಕೊಳ್ಳಬೇಡ, ಮಿತ್ರಾ. ರಾಜಧಾನೀ ನಗರದಲ್ಲಿ ಸಾವಿರ ವರಹ ಸಂಬಳದಿಂದ ದಿನದ ಬದುಕು ಸಾಗಿಸಬಹುದೇ ಹೊರತು ಸುಖಿ ಜೀವನಕ್ಕೆ ಅದೇನೂ ಸಾಲದು. ಅಲ್ಲದೆ ರಾಜಾಶ್ರಯವೆಂಬುದು ಒಬ್ಬರ ಕೈಕೆಳಗಿನ ದಾಸ್ಯವೃತ್ತಿ ತಾನೇ?" ಎಂದನು ಗೋಪೀನಾಥ.





ಧನವೂ ಹೆಚ್ಚಾಗಿ ಸಂಪಾದನೆಯಾಗುತ್ತಿದ್ದರೂ, ಕುಟುಂಬವು ದೊಡ್ಡದಾಗುತ್ತಾ ಖರ್ಚು ಹೆಚ್ಚುತ್ತಾ ಬಂದುದರಿಂದ ಆರ್ಥಿಕವಾಗಿ ಅವನ ಸ್ಥಿತಿ ಹೇಳಿಕೊಳ್ಳುವಷ್ಟು ಉತ್ತಮವಾಗಲಿಲ್ಲ. ಕುಟುಂಬ ವ್ಯವಹಾರದಲ್ಲಿ ಏನೇನೋ ರಗಳೆಗಳೂ ಎದ್ದು ಅವನ ಶಾಂತಿಯನ್ನು ಕೆಡಿಸಿದುವು.

ಕಡೆಗೆ ಅವನು ಚೆನ್ನಾಗಿ ಆಲೋಚನೆ ಮಾಡಿ ಹೆಂಡತಿ ಮಕ್ಕಳೊಂದಿಗೆ ರಾಜಧಾನಿಯನ್ನು ಬಿಟ್ಟು ಮನೆಗೆ ಬಂದುಬಿಟ್ಟನು. ಆ ಸಮಯಕ್ಕೆ ಹಂಸಪಾದನಿಗೆ ವಯಸ್ಸು ಮೀರಿ ಹೋದುದರಿಂದ ವ್ಯವಸಾಯ ಮಾಡಲಿಕ್ಕಾಗದೆ ಕಷ್ಟಪಡುತ್ತಿದ್ದನು. ರತ್ನಪಾದನು ತಂದೆಯನ್ನು ಸುಮ್ಮನಿರಲು ಹೇಳಿ, ವ್ಯವಸಾಯದ ಕೆಲಸಕ್ಕೆ ತಾನೇ ತಲೆಹಾಕಿ ದುಡಿಯ ತೊಡಗಿದನು. ತಮಗಿರುವ ಸ್ವಲ್ಪ ಹೊಲದೊಂದಿಗೆ ಬೇರೆ ಹೊಲಗದ್ದೆಗಳನ್ನೂ ಗೇಣಿಗೆ ತೆಗೆದು ಕೆಲಸ ಮಾಡಲಿಕ್ಕೂ ತೊಡಗಿದನು.

ರಾಜಾಸ್ಥಾನದಲ್ಲಿ ಪಟ್ಟೆಯ ಆಸನಗಳ ಮೇಲೆ ಕುಳಿತುಕೊಂಡು ಸಾಹಿತ್ಯ ಚರ್ಚೆಗಳನ್ನು ಮಾಡಿಕೊಂಡಿದ್ದ ರತ್ನಪಾದನಿಗೆ, ಮಳೆಯೆನ್ನದೆ ಬಿಸಿಲೆನ್ನದೆ ಕಷ್ಟಪಟ್ಟು ಕೆಲಸ ಮಾಡಬೇಕಾಗಿ ಬಂದುದು ಕಷ್ಟವೆನಿಸದಿರಲಿಲ್ಲ. ಆದರೆ ಉತ್ಸಾಹವನ್ನೂ, ಹಟವನ್ನೂ ಬಿಡದೆ ಕೆಲಸಮಾಡಿ ಪಳಗುತ್ತ ಬಂದ ಮೇಲೆ ಈ ಹೊಸ ಜೀವಿತಕ್ಕೆ ಪಳಗಿಹೋದನು.

ಅದು ಚಿಕ್ಕ ಗ್ರಾಮವಾದುದರಿಂದ ನಗರದಷ್ಟು ಖರ್ಚುಗಳಿರಲಿಲ್ಲ. ಆದುದರಿಂದ ಬರುವ ಆದಾಯದಲ್ಲಿ ಖರ್ಚುಗಳನ್ನು ಕಳೆದು ಸ್ವಲ್ಪ ಉಳಿಸಿಕೊಳ್ಳಲಿಕ್ಕೂ ಸಾಧ್ಯವಾಯಿತು. ಮುಂದೆ ನಾಲ್ಕು ವರ್ಷಗಳು ಕಳೆಯುವಷ್ಟರಲ್ಲಿ ಅವನ ಹತ್ತಿರ ದೊಡ್ಡ ಮೊತ್ತದ ಹಣ ಸೇರಿತು. ಆದರಿಂದ ಅವನು ವ್ಯವಸಾಯದ ಜತೆಯಲ್ಲಿ ವ್ಯಾಪಾರವನ್ನೂ ಪ್ರಾರಂಭಿಸಿದನು. ಬೇರೆ ವರ್ತಕರ ಕೈಯಿಂದ ಮುಂದಾಗಿ

ಹಂಸಪಾದನು ಚಿಂತಿಸುತ್ತಾ ಮನೆಗೆ ಹಿಂದಿರುಗಿದನು. ತಂದೆ ಚಿಂತೆಯಿಂದಿರುವುದನ್ನು ನೋಡಿ ರತ್ನಪಾದನು ಕಾರಣವೇನೆಂದು ಕೇಳಿದನು. ತಂದೆ ಹೇಳಿದುದನ್ನೆಲ್ಲಾ ಕೇಳಿ ರತ್ನಪಾದನಿಗೆ ಆಶ್ಚರ್ಯವಾಯಿತು. ತಂದೆಗೆ ಗೋಪೀನಾಥನ ಮಗಳನ್ನು ಸೊಸೆಯಾಗಿ ತಂದುಕೊಳ್ಳಬೇಕೆಂಬ ಆಸೆ ಇದ್ದಿತೆಂದು ಅದುವರೆಗೂ ರತ್ನಪಾದನಿಗೆ ತಿಳಿದಿರಲಿಲ್ಲ.

ಮುಂದೆ ಕೆಲವು ದಿನಗಳಲ್ಲಿ ಅವನಿಗೆ ತಕ್ಕ ಬೇರೆ ಹುಡುಗಿ ಸಿಕ್ಕಿತು. ಪಕ್ಕದ ಊರಿನಲ್ಲಿದ್ದ ತಾರಾಂಗನೆಂಬವನ ಕುಮಾರಿಯೊಂದಿಗೆ ರತ್ನಪಾದನ ಮದುವೆ ನಡೆಯಿತು.

ಮುಂದೆ ಒಂದು ತಿಂಗಳ ಮೇಲೆ ರತ್ನಪಾದನು ಹೆಂಡತಿಯೊಂದಿಗೆ ರಾಜಧಾನೀ ನಗರಕ್ಕೆ ಹೋಗಿ ಸಂಸಾರ ಹೂಡಿದನು.

ಕ್ರಮಕ್ರಮವಾಗಿ ಅವನಿಗೆ ರಾಜಧಾನಿಯಲ್ಲಿ ಒಳ್ಳೆಯ ಹೆಸರೂ, ಖ್ಯಾತಿಯೂ ಸೇರತೊಡಗಿತು.

ಧಾನ್ಯಗಳನ್ನು ಕೊಂಡುಕೊಂಡು ಪಟ್ಟಣದಿಂದ ಬರುವ ವರ್ತಕರಿಗೆ ಲಾಭಕ್ಕೆ ಮಾರುತ್ತಿದ್ದನು.

ಹತ್ತು ವರ್ಷ ಕಳೆಯುವಷ್ಟರಲ್ಲಿ ಅವನ ವ್ಯವಸಾಯ ಮತ್ತು ವ್ಯಾಪಾರಗಳಿಂದ ಬಂದ ಲಾಭವು ಲಕ್ಷವನ್ನು ಮೀರಿತು. ಆದರಿಂದ ಹಳೇ ಮನೆಯನ್ನು ಕೆಡವಿಸಿ ಉತ್ತಮವಾದ ಹೊಸ ಭವನವನ್ನು ಕಟ್ಟಿಸಿದನು. ಬೇರೆಯವರ ದೃಷ್ಟಿಯಲ್ಲಿ ಈಗ ರತ್ನಪಾದನು ದೊಡ್ಡ ವ್ಯಾಪಾರಿ, ಧನಿಕ ಜಮೀನುದಾರ. ಅವನ ಹಿರಿಯ ಮಗನು ಬೆಳೆದು, ತಂದೆಯೊಂದಿಗೆ ವ್ಯಾಪಾರದಲ್ಲಿ ಚೆನ್ನಾಗಿ ಪಳಗಿ ಸಮರ್ಥನಾಗುತ್ತಾ ಬರುತ್ತಿದ್ದನು.



ಹಿಂದಿನ ಕಾಲದಲ್ಲಿ ರತ್ನಪಾದನಿಗೆ ಕುಮಾರಿಯನ್ನು ಕೊಡಲು ನಿರಾಕರಿಸಿದ ಗೋಪೀನಾಥನು, ನೆರೆಯ ಊರಿನ ದೊಡ್ಡ ಸಂಪನ್ನರ ಮನೆಗೆ ಅವಳನ್ನು ಕೊಟ್ಟು ಮದುವೆ ಮಾಡಿದ್ದನು. ಅವಳ ಮಗಳಿಗೆ ಈಗ ಮದುವೆಯ ವಯಸ್ಸು ಬಂದಿತ್ತು. ತನ್ನ ಮೊಮ್ಮಗಳನ್ನು ರತ್ನಪಾದನ ಮಗನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಆಲೋಚನೆ ಗೋಪೀನಾಥನಿಗೆ ಬಂದಿತು. ರತ್ನಪಾದನ ಮಗನ ಚುರುಕುತನವೂ, ವ್ಯಾಪಾರದಲ್ಲಿ ಅವನಿಗಿರುವ ಸಾಮರ್ಥ್ಯವೂ ಅವನನ್ನು ತುಂಬಾ ಆಕರ್ಷಣೆ ಮಾಡಿತು. ಅದರ ಮೇಲೆ ಲಕ್ಷಾಧಿಕಾರಿಯ ಮಗ!

ಒಂದು ದಿನ ಗೋಪೀನಾಥನು ಹಂಸಪಾದನನ್ನು ಸಂಧಿಸಿ, ತನ್ನ ಮನಸ್ಸಿನೊಳಗಿನ ಮಾತನ್ನು ಬಯಲಿಗಿಟ್ಟು, "ಹಿಂದೆ ನಡೆದ ಸಮಾಚಾರವನ್ನು ನೆನೆದು ಬೇಸರಪಡುವುದು ಚೆನ್ನಾಗಿಲ್ಲ. ವಿಧಿವಶದಿಂದಾಗಿ ಅಂದು ನಾವು ಸಂಬಂಧಿಕರಾಗುವ ಯೋಗ ಕೈಜಾರಿ ಹೋಯಿತೆಂದು ತಿಳಿಯಬೇಕು, ಈಗ ನಾವು ಸಂಬಂಧಿಕರಾಗೋಣ" ಎಂದನು.

ಹಂಸಪಾದನು ಸ್ವಲ್ಪ ಸುಮ್ಮನಿದ್ದು, ಆಮೇಲೆ ಕೋಪದ ಸ್ವರದಲ್ಲಿ, "ಅದನ್ನು ಮರೆಯುವುದುಂಟೆ? ನನ್ನ ಮೊಮ್ಮಗನಿಗೆ ದೊಡ್ಡ ದೊಡ್ಡ ಕೋಟೀಶ್ವರರು ಮಗಳನ್ನು ಕೊಡಲು ಕಾದಿದ್ದಾರೆ" ಎಂದನು.

ಹಿಂದೆ ಗೋಪೀನಾಥನಿಂದ ಆದ ಅವಮಾನವನ್ನು ಹಂಸಪಾದನು ಮರೆಯಲಿಲ್ಲವೆಂದಾಯಿತು. ಅದು ಇನ್ನೂ ಅವನ ಮನಸ್ಸನ್ನು ಬಾಧಿಸಿಕೊಂಡಿದೆ. ಅವನಿಗೆ ತಕ್ಕ ಪ್ರತೀಕಾರ ಮಾಡಲು ತಕ್ಕ ಸಮಯವನ್ನು ಅವನು ಕಾದುಕೊಂಡಿದ್ದನೆಂದೇ ಇದರಿಂದ ಗೊತ್ತಾಯಿತು. ಈಗ ದೊಡ್ಡ ಧನಿಕನಾದ ತನ್ನ ಮಗನ ಕಾರಣದಿಂದಾಗಿ ಗೋಪೀನಾಥನನ್ನು ಅವಮಾನ ಪಡಿಸುವ ಸಮಯ ಬಂದಿತ್ತು. ಅದನ್ನು ಹೀಗೆ ಉಪಯೋಗಿಸಿಕೊಂಡನು.

ಆಗ ಸಮೀಪದಲ್ಲಿದ್ದು ಇದನ್ನು ಕೇಳಿಕೊಂಡಿದ್ದ ರತ್ನಪಾದನು, "ಅಪ್ಪಾ, ನಾವು ಹಿಂದಿನ ವಿಷಯವನ್ನು ಪೂರ್ತಿ ಮರೆತುಬಿಡೋಣ. ನಮಗೆ ಈಗ ಧನಕ್ಕೆ ಯಾವ ಕೊರತೆಯೂ ಇಲ್ಲ" ಎಂದು ಹೇಳಿ

ಗೋಪೀನಾಥನೊಂದಿಗೆ ಸಂಬಂಧ ಮಾಡಿಕೊಳ್ಳಲು ತಂದೆಯನ್ನು ಒಪ್ಪಿಸಿದನು.

ತರುವಾಯ ಶುಭ ಮುಹೂರ್ತದಲ್ಲಿ ಗೋಪೀನಾಥನ ಮೊಮ್ಮಗಳೊಂದಿಗೆ ಹಂಸಪಾದನ ಮೊಮ್ಮಗನ ಮದುವೆ ನಿರಾತಂಕವಾಗಿ ವೈಭವದಿಂದಲೇ ನಡೆಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಒಂದು ದಿನ ತಂದೆಯನ್ನೂ ತನ್ನನ್ನೂ ಅವಮಾನಪಡಿಸಿದ ಗೋಪೀನಾಥನ ಮೊಮ್ಮಗಳನ್ನು ರತ್ನಪಾದನು ತನ್ನ ಮಗನಿಗೆ ಏತಕ್ಕೆ ತಂದುಕೊಂಡನು? ತಾನು ಹೊಂದಿದ ಅವಮಾನಕ್ಕೆ ಪ್ರತೀಕಾರ ಮಾಡುವ ಅವಕಾಶ ಬಂದಿದ್ದರೂ ಅದನ್ನೇಕೆ ಜಾರಿಸಿಬಿಟ್ಟನು? ತಾನು ದೊಡ್ಡ ಉದಾರಿ ಎನಿಸಲಿಕ್ಕೋ? ಅಥವಾ ಗೋಪೀನಾಥನಂಥವನೇ ತಮ್ಮ ಹತ್ತಿರ ಕೇಳಲಿಕ್ಕೆ ಬಂದನೆಂಬ ಸಂತೃಪ್ತಿಯಿಂದಲೋ? ಇದಕ್ಕೆ ತಕ್ಕ ಉತ್ತರ ತಿಳಿದು ಸಹಾ ಹೇಳದೆ ಹೋದರೆ ನಿನ್ನ ತಲೆ ಒಡೆಯುವುದು ಖಂಡಿತ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಗೋಪೀನಾಥನು ಪ್ರತೀಕಾರ ಮಾಡಿಸಿಕೊಳ್ಳುವಷ್ಟು ದೊಡ್ಡ ತಪ್ಪೇನೂ ಮಾಡಿರಲಿಲ್ಲ. ಅವನು ಒಳ್ಳೆಯ ಲೌಕಿಕ ಜ್ಞಾನವುಳ್ಳ ವ್ಯಾಪಾರಸ್ಥನು. ಬಂಟತನಕ್ಕೂ ನೆಂಟತನಕ್ಕೂ ಸರಿಸಮತೆ ಬೇಕು. ಅಂತಲೇ ಅವನು ತನ್ನ ಕುಮಾರಿಯನ್ನು ಆಗಿನ ಪರಿಸ್ಥಿತಿಯಲ್ಲಿ ರತ್ನಪಾದನಿಗೆ ಕೊಡಲು, ಒಪ್ಪದೆ ಸಂಪನ್ನರ ಮನೆಗೆ ಕೊಡಲು ಇಷ್ಟಪಟ್ಟನು. ರತ್ನಪಾದನಿಗೆ ಚಿಕ್ಕ ರೈತನ ಸ್ಥಾನದಿಂದ ದೊಡ್ಡ ವ್ಯಾಪಾರಿಯ ಅಂತಸ್ತು ಬಂದ ಮೇಲೆ ಗೋಪೀನಾಥನ ಮನಸ್ಸನ್ನು ಅರ್ಥ ಮಾಡಿಕೊಳ್ಳುವುದೇನೂ ಕಷ್ಟವಿಲ್ಲ.

ರತ್ನಪಾದನ ತಂದೆಯಾದ ಹಂಸಪಾದನು ಕೇವಲ ಚಿಕ್ಕ ರೈತನೇ. ಧನವು ಮನುಷ್ಯರ ನಡುವೆ ಅಂತರಗಳನ್ನುಂಟುಮಾಡುತ್ತದೆಂದೂ, ಅದನ್ನು ದಾಟಿ ಬರುವುದು ಅಷ್ಟು ಸುಲಭವಲ್ಲವೆಂದೂ ಅವನಿಗೆ ತಿಳಿಯದು. ಆದುದರಿಂದಲೇ ಅಂದು ಗೋಪೀನಾಥನು ಅಂಗೀಕರಿಸದಿರುವುದನ್ನು ಅವಮಾನವಾಗಿ ಭಾವಿಸಿ, ಮತ್ತೆ ಅವನನ್ನು ಅವಮಾನಿಸಬೇಕು ಎಂದುಕೊಂಡನು. ರತ್ನಪಾದನು ತಂದೆಯ ಹಾಗಿನವನಲ್ಲ. ತುಂಬಿದ ಕೊಡದಂತೆ ದೊಡ್ಡ ವರ್ತಕನೂ, ಅದರ ಮೇಲೆ ಪಂಡಿತನೂ ಆದ ರತ್ನಪಾದನಲ್ಲಿ ಆ ಬಗೆಯ ಭಾವನೆಗಳಿಗೆ ತಾವಿಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೇ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಹಿಡಿದು ನೇತಾಡಲು ತೊಡಗಿತು.





# ಸಾಧಕಲಕ್ಷಣ

ಚಂದ್ರಪುರಿಯ ಜಮೀನುದಾರರ ಹತ್ತಿರ ಕೇಶವಸ್ವಾಮಿ ಎಂಬ ದಿವಾನನಿದ್ದನು. ಬಹಳ ಕಾಲದಿಂದ ದಿವಾನನಾಗಿದ್ದು ವೃದ್ಧಾಪ್ಯದಲ್ಲಿ ಕೆಲಸದ ಒತ್ತಡವು ಜಾಸ್ತಿಯಾದುದರಿಂದ, ಸಹಾಯಕನನ್ನು ನಿಯಮಿಸಿಕೊಳ್ಳಲು ಜಮೀನುದಾರರು ಅಪ್ಪಣೆ ಕೊಟ್ಟರು. ಅದಕ್ಕೆ ತಕ್ಕ ಬುದ್ಧಿವಂತನಾದವನನ್ನು ಆರಿಸಿ ಇರಿಸಿಕೊಳ್ಳಬೇಕಾಗಿತ್ತು.

ಈ ಸಂಗತಿಯನ್ನು ತಿಳಿದು ರಾಮಭದ್ರನೆಂಬವನೂ, ಶಿವಚಂದ್ರನೆಂಬವನೂ ಜಮೀನುದಾರರ ಬಳಿಗೆ ಬಂದು, ತಾವು ಆ ಪದವಿಯನ್ನು ಚೆನ್ನಾಗಿ ನಿರ್ವಹಿಸಬಲ್ಲೆವೆಂದು ಹೇಳಿಕೊಂಡರು. ಜಮೀನುದಾರರು ದಿವಾನ ಕೇಶವಸ್ವಾಮಿಯನ್ನು ಕರೆದು, ಬಂದವರಲ್ಲಿ ಹಿಡಿಸಿದವನನ್ನು ಇರಿಸಿಕೊಳ್ಳುವಂತೆ ಹೇಳಿದರು.

ಕೇಶವಸ್ವಾಮಿ ಮೊದಲು ರಾಮಭದ್ರನನ್ನು ತನ್ನ ಬಳಿಗೆ ಕರೆದು, "ನೋಡಪ್ಪಾ, ದಿವಾಣ ಶಾಖೆಯಲ್ಲಿ ಕೆಲಸ ಮಾಡುವುದೆಂದರೆ ಬಗೆ ಬಗೆಯಾಗಿರುತ್ತದೆ. ಅನೇಕ ಸಮಸ್ಯೆಗಳು ಇದಿರಾಗುತ್ತವೆ. ಒಂದು ಸಮಸ್ಯೆಗೂ ಮತ್ತೊಂದಕ್ಕೂ ಹೋಲಿಕೆಯೇ ಇರಲಾರದು. ಒಂದೊಂದು ಸಾರಿ ಒಂದು ಸಮಸ್ಯೆಯನ್ನು ಪರಿಹರಿಸುವ ವಿಧಾನವು ಇನ್ನೊಂದು ಸಮಸ್ಯೆಯ ಪರಿಹಾರಕ್ಕೆ ಬಾರವು" ಎಂದನು.

ಅದಕ್ಕೆ ರಾಮಭದ್ರನು. "ಅಯ್ಯಾ, ನನಗೆ ಅಂತಹ ದಿವಾಣ ಕಾರ್ಯಾಲಯಗಳಲ್ಲಿ ಕೆಲಸ ಮಾಡಿದ ಅನುಭವ ಸಾಕಷ್ಟಿದೆ" ಎಂದನು.

"ಎಲ್ಲಾ ದಿವಾಣಗಳೂ ಒಂದೇ ರೀತಿಯಾಗಿರುವುದಿಲ್ಲವಷ್ಟೆ? ಆ ಬಗೆಯ ನಿನ್ನ ಅನುಭವವು ಇಲ್ಲಿಯ ದಿವಾಣಕ್ಕೆ ಎಷ್ಟರಮಟ್ಟಿಗೆ ಉಪಯೋಗವಾಗುತ್ತದೋ ಹೇಳಲಾರೆನು. ಈಗ ಈ ದಿವಾಣವನ್ನು ಕುರಿತು ಹೇಳುತ್ತೇನೆ. ಇಲ್ಲಿ ಈಗಾಗಲೇ ಎಷ್ಟೋ ಕೆಲಸಗಳು ಹಾಗೆ ಹಾಗೇ ಬಿದ್ದಿವೆ. ಅವುಗಳೆಲ್ಲ ಜಟಿಲ ಸಮಸ್ಯೆಗಳೊಂದಿಗೆ ಸಿಕ್ಕಿಕೊಂಡಿವೆ. ಅದನ್ನೆಲ್ಲಾ ಒಂದು ಕ್ರಮಕ್ಕೆ ತರಬೇಕಾದರೆ ನಿನ್ನದಾದ ಒಂದು ಪ್ರತ್ಯೇಕ ಆಲೋಚನೆಯ ಪ್ರಣಾಳಿಕೆ ಹೇಳಬಲ್ಲೆಯಾ?" ಎಂದು ಕೇಶವಸ್ವಾಮಿ ಕೇಳಿದನು.

"ನಾನು ಪರಿಷ್ಕಾರಗೊಳಿಸಬೇಕಾದ ಪ್ರತಿ ಸಮಸ್ಯೆಯನ್ನೂ ಚೆನ್ನಾಗಿ ಹಿಂದು ಮುಂದುಗಳೊಡನೆ ಪರಿಶೀಲನೆ ಮಾಡಿ, ಯಾವುದಕ್ಕೆ ಯಾವ

ಕಮಲಿನಿ

ರೀತಿ ಸರಿ, ಎಂಬ ನಿರ್ಣಯಕ್ಕೆ ಬಂದ ಮೇಲೆಯೇ ಕೆಲಸಕ್ಕೆ ಪ್ರಾರಂಭಿಸುತ್ತೇನೆ. ಆದರಿಂದ ಎಲ್ಲಾ ಕೆಲಸಗಳನ್ನೂ ಅಂದುಕೊಂಡ ರೀತಿಯಲ್ಲಿ ಪರಿಷ್ಕಾರ ಮಾಡಲು ಆತಂಕಗಳಿರವು" ಎಂದನು ರಾಮಭದ್ರ.

ಅವನನ್ನು ಕಳುಹಿಸಿ ದಿವಾನ ಕೇಶವಸ್ವಾಮಿ ಶಿವಚಂದ್ರನನ್ನು ಕರೆಯಿಸಿ, ರಾಮಭದ್ರನಿಗೆ ಹೇಳಿದ ಹಾಗೆಯೇ ಹೇಳಿ, "ಹೇಗೆ ಪರಿಷ್ಕರಿಸುವಿ?" ಎಂದು ಕೇಳಿದನು.

ಅದಕ್ಕೆ ಶಿವಚಂದ್ರನು, "ನಾನು ಯಾವುದಾದರೂ ಒಂದು ಜಟಿಲ ಸಮಸ್ಯೆಯನ್ನು ಪರಿಷ್ಕರಿಸುವುದಕ್ಕೆ ಮೊದಲು ಅದಕ್ಕೆ ಸಂಬಂಧಿಸಿದ ಕೆಲವು ಸರಿಯಾದ ಪ್ರಶ್ನೆಗಳನ್ನು ತಯಾರಿಸುತ್ತೇನೆ. ಅವುಗಳಿಗೆ ತೃಪ್ತಿಕರವಾದ ಉತ್ತರಗಳು ಸಿಕ್ಕಿದ ಮೇಲೆ ಕಾರ್ಯಕ್ರಮವನ್ನು ಪ್ರಾರಂಭಿಸುತ್ತೇನೆ. ಅನೇಕ ಕಾರ್ಯಗಳು ಪೇರಿಸಿಕೊಂಡಿದ್ದರೆ, ಅವುಗಳಲ್ಲಿ ಯಾವುದು ಮೊದಲು ಎಂದು ನಿರ್ಧರಿಸಿ ಅದನ್ನು ಕೈಗೆತ್ತಿಕೊಳ್ಳುತ್ತೇನೆ" ಎಂದನು.

ಅವನನ್ನೂ ಕಳುಹಿಸಿ ಕೇಶವಸ್ವಾಮಿ ಜಮೀನುದಾರರ ಬಳಿಗೆ ಹೋಗಿ ಅವರಿಬ್ಬರು ಹೇಳಿದುದನ್ನೂ ಹೇಳಿದನು. "ಇಬ್ಬರನ್ನೂ ಸರಿಸಮಾನರೆನ್ನಬಹುದೆ?" ಎಂದರು ಜಮೀನುದಾರರು ಸಂಶಯಿಸುತ್ತ. "ಅಂತಹುದೇನಿಲ್ಲ ಪ್ರಭುಗಳೇ. ತಾವು ಶಿವಚಂದ್ರನನ್ನೇ ಈ ಉದ್ಯೋಗದಲ್ಲಿ ನಿಯಮಿಸಬಹುದು. ಮುಂದೆ ಒಳ್ಳೆಯ ದಿವಾನನಾಗುವ ಲಕ್ಷಣ ಅವನಲ್ಲಿದೆ" ಎಂದನು ಕೇಶವಸ್ವಾಮಿ.

"ಹಾಗೇನು? ನೀವು ಶಿವಚಂದ್ರನನ್ನು ಆರಿಸಲಿಕ್ಕೆ ಕಾರಣವೇನು? ಅಂತಹ ಪ್ರತ್ಯೇಕತೆ ಅವನಲ್ಲಿ ಏನು ಕಂಡಿರಿ?" ಎಂದು ಕೇಳಿದರು ಜಮೀನುದಾರರು.

"ಕಾರಣವಿದೆ. ಒಂದು ಕೆಲಸವನ್ನು ಕೈಯಲ್ಲಿ ತೆಗೆದುಕೊಳ್ಳುವಾಗ ಯಾವುದು ಮೊದಲು ಎಂದು ತಿಳಿದು ಇದಿರಾಗುವ ಸಾಧಕ ಬಾಧಕಗಳನ್ನು ತರ್ಕಿಸಿಕೊಂಡು ಪ್ರಶ್ನೆಗಳನ್ನು ಎಬ್ಬಿಸಿ, ಅವುಗಳಿಗೆ ಉತ್ತರ ಹುಡುಕಿಕೊಳ್ಳುವುದೇ ಕಾರ್ಯಸಾಧಕನ ಸಮರ್ಥತೆಯ ಲಕ್ಷಣ. ನಮ್ಮೊಳಗೆ ನಾವೇ ಮೊದಲು ಸರಿಯಾದ ಪ್ರಶ್ನೆಗಳನ್ನು ಮಾಡಿಕೊಳ್ಳಲು ಸಾಧ್ಯವಾದರೆ ಅವುಗಳಿಗೆ ಉತ್ತರ ಹುಡುಕುವುದೇನೂ ಕಷ್ಟವಾಗದು. ಶಿವಚಂದ್ರನಲ್ಲಿ ಈ ಲಕ್ಷಣಗಳಿರುವುದರಿಂದಲೇ ಅವನೇ ಈ ಪದವಿಗೆ ಅರ್ಹನೆಂದು ನಾನು ಭಾವಿಸುತ್ತೇನೆ" ಎಂದನು ಹಿರಿಯ ದಿವಾನ ಕೇಶವಸ್ವಾಮಿ.

ವೃದ್ಧ ದಿವಾನನ ಅರಿಕೆಗೆ ಜಮೀನುದಾರರು ತೃಪ್ತರಾಗಿ, ಶಿವಚಂದ್ರನನ್ನು ಆತನಿಗೆ ಸಹಾಯಕನಾಗಿ ನಿಯಮಿಸಿ ಅಪ್ಪಣೆ ಜ್ಯಾರೀ ಮಾಡಿದರು.



# ವಿಮರ್ಶಕ

ಒಂದಾನೊಂದು ರಾಜ್ಯದಲ್ಲಿ ಸುಂದರವಾದ ಬೊಂಬೆಗಳನ್ನು ಮಾಡುವ ಕೈ ಕೆಲಸಗಾರರಿದ್ದರು. ಅವರು ಪಕ್ಷಿಗಳ ಗರಿಗಳನ್ನೂ, ನವಿಗಳನ್ನೂ, ಪ್ರಾಣಿಗಳ ಚರ್ಮಗಳನ್ನೂ ಬಳಸುವುದರಿಂದ ಬೊಂಬೆಗಳಿಗೆ ಜೀವಕಳೆ ಬಂದಹಾಗೆ ಕಾಣುತ್ತಿತ್ತು.

ಒಂದು ಸಾರಿ ರಾಜನು ಸಹಜ ವಾತಾವರಣವಿರುವ ಉದ್ಯಾನವನದಲ್ಲಿ ಬೊಂಬೆಗಳ ಪ್ರದರ್ಶನಕ್ಕೆ ಏರ್ಪಾಡು ಮಾಡಿದನು.

ಅವುಗಳನ್ನು ನೋಡಲು ಅನೇಕ ಮಂದಿ ಬಂದು ಗುಂಪು ಗೂಡಿದರು. ಅವರಲ್ಲಿ ಒಬ್ಬ ವಿಮರ್ಶಕನೂ ಇದ್ದನು. ಅವನು ಪ್ರಾಣಿಗಳ ಪಕ್ಷಿಗಳ ಬೊಂಬೆಗಳ ಹತ್ತಿರ ನಿಂತುಕೊಂಡು, ಅವುಗಳ ಸಹಜತೆಯನ್ನು ಕುರಿತು ಪಕ್ಕದಲ್ಲಿದ್ದವರೊಂದಿಗೆ ವ್ಯಾಖ್ಯಾನಿಸಲು ತೊಡಗಿದನು

ಕಡೆಗೆ ಆ ವಿಮರ್ಶಕನ ದೃಷ್ಟಿ ಚಿಕ್ಕದೊಂದು ಮಾವಿನ ಗಿಡದ ಕೊಂಬೆಯಲ್ಲಿರುವ ಎರಡು ಗಿಣಿಗಳ ಕಡೆಗೆ ಹೋಯಿತು.

ಅವುಗಳನ್ನು ನೋಡಿ ಅವನು, "ಗಿಣಿಯ ಮೂಗಿನ ಕೆಂಪೆಂದರೆ ಹೇಗಿರಬೇಕು ! ಹೀಗೇನು ? ಬಣ್ಣಗಳ ಮಿಶ್ರಣ ಕೂಡಾ ತಿಳಿಯದವನು ಈ ಗಿಣಿಗಳನ್ನು ತಯಾರಿಸಿದ್ದಾನೆ. ಗಿಣಿಗಳ ಕಣ್ಣುಗಳಿಗೆ ಒಳ್ಳೆಯ ಗಾಜಿನ ಕಣ್ಣುಗಳನ್ನಿರಿಸಲಿಕ್ಕೂ ಅವನಿಂದಾಗಲಿಲ್ಲ. ಅದೆಂಥ ರೆಕ್ಕೆಗಳು ! ಅದೆಂಥ ಬೆರಳುಗಳು !" ಎಂದನು.

ಅಷ್ಟರಲ್ಲಿ ಅವನು ವಿಮರ್ಶಿಸುವ ಗಿಣಿಗಳಲ್ಲಿ ಒಂದು ಟಪಟಪನೆ ರೆಕ್ಕೆಗಳನ್ನಾಡಿಸಿ ಹಾರಿ ಹೋಯಿತು. ಆ ಸಮಯದಲ್ಲಿ ಅದರ ರೆಕ್ಕೆ ತಾಗಿದುದರಿಂದ ಬೊಂಬೆ ಗಿಣಿ. ಪಟಕ್ಕನೆ ಕೆಳಗೆ ಬಿದ್ದು ಒಡೆದು ಹೋಯಿತು.

ಅದುವರೆಗೂ ವಿಮರ್ಶಕನ ವ್ಯಾಖ್ಯಾನವನ್ನು ಕೇಳಿಕೊಂಡಿದ್ದವರು ಘಕ್ಕನೆ ನಕ್ಕರು.

ವಿಮರ್ಶಕನು ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಹೊರಟು ಹೋದನು.





# ಗುಡ್ಡದಂಥ ಧೈರ್ಯ

ಒಂದು ದಿನ ರಾತ್ರಿ ಎರಡನೇ ಜಾಮದ ಹೊತ್ತಿನಲ್ಲಿ ನಾಲ್ವರು ಪ್ರಯಾಣಿಕರು ದೋಣಿಯಲ್ಲಿ ಕುಳಿತು ನಾಗಾವಳೀ ನದಿಯನ್ನು ದಾಟಿ ಆಚೆಯ ತೀರವನ್ನು ಸೇರಿದರು. ಅವರು ಇನ್ನೂ ನಾಲ್ಕು ಹರದಾರಿ ದೂರದಲ್ಲಿರುವ ವಿಕ್ರಮ ಪುರಕ್ಕೆ ಹೋಗಬೇಕಾಗಿತ್ತು. ಅಲ್ಲೊಂದು ಕುದುರೆ ಗಾಡಿಯೂ ಸಿದ್ಧವಾಗಿತ್ತು.

ನಾಲ್ವರು ಪ್ರಯಾಣಿಕರೂ ಆ ಕುದುರೆಯ ಗಾಡಿಯಲ್ಲಿ ಏರಿ ಕುಳಿತರು. ಗಾಡಿ ಹೊರಟಿತು. ಕತ್ತಲಿನ ರಾತ್ರಿ. ಅದಕ್ಕೆ ಜತೆಯಾಗಿ ಗೊಂಡಡವಿಯ ದಾರಿ. ಏರುತಗ್ಗುಗಳಿರುವ ದಾರಿಯಲ್ಲಿ ಗಾಡಿ ಗಡಬಡಿಸುತ್ತಾ ಹೋಗುತ್ತಿದ್ದಿತು. ಒಂದು ಕಡೆಯಲ್ಲಿ ಒಂದು ಕರಡಿಯೂ, ಅದರ ಎರಡು ಮರಿಗಳೂ ದಾರಿಗೆ ಅಡ್ಡವಾಗಿ ಬಂದು ವೇಗವಾಗಿ ಬದಿಯಲ್ಲಿದ್ದ ಮರಗಳಾಚೆಗೆ ಓಡಿಹೋದುವು.

ಅದನ್ನು ನೋಡಿ ಪ್ರಯಾಣಿಕರಲ್ಲೊಬ್ಬನು, "ಒಳ್ಳೇ ವೇಳೆ! ಆ ಕರಡಿಗಳು ನಮ್ಮ ಮೇಲೆ ಹಾರಲಿಲ್ಲ. ಇಂಥಾ ರಾತ್ರಿಯ ಹೊತ್ತಿನಲ್ಲಿ ಪ್ರಯಾಣ ಮಾಡುವುದಕ್ಕಿಂತ ಬುದ್ಧಿಗೇಡೀ ಕೆಲಸ ಬೇರೊಂದಿರಲಿಕ್ಕಿಲ್ಲ!" ಎಂದನು.

ಆ ಕೂಡಲೇ ಪ್ರಯಾಣಿಕರಲ್ಲಿ ಇನ್ನೊಬ್ಬನು, "ನಿಲ್ಲಿಸು ಗಾಡಿಯನ್ನು!" ಎಂದು ಆಜ್ಞೆ ಮಾಡುವ ಹಾಗೆ ಜೋರಾಗಿ ಹೇಳಿದನು. ಗಾಡಿ ನಿಂತ ಕೂಡಲೇ ಅವನು ಕೆಳಕ್ಕೆ ಹಾರಿ, ತನ್ನ ದುಸ್ಸಿನೆಡೆಯಿಂದ ತಳತಳ ಹೊಳೆಯುವ ಕತ್ತಿಯನ್ನು ತೆಗೆದು, ತೋರಿಸಿ ಆಡಿಸುತ್ತ "ಈ ಚುಟಿಸುಣ್ಣನ ಹೆಸರು ಕೇಳಿದ್ದೀರಷ್ಟೆ? ಹೆಬ್ಬುಲಿಗಿಂತ ಭಯಂಕರನಾದವನು. ಈ ಸುತ್ತಲಿರುವ ಕಾಡುಗುಡ್ಡ ಪ್ರಾಂತದಲ್ಲಿ ನನ್ನ ಮಾತಿಗೆ ಎದುರಿಲ್ಲ! ಹೇಳಿದ ಕೂಡಲೇ ನಗನಟ್ಟು ಹಣಾ ಗಿಣಾ ಪೂರಾ ತೆಗೆದು ಕೊಡುವವರಿಗೆ ಯಾವ ತೊಂದರೆಯೂ ಇಲ್ಲ. ಅವನ್ನು ತೆಗೆಯಲು ತಡ ಮಾಡಿದರೂ, ಸಹಾಯಕ್ಕಾಗಿ ಕೂಗಿಕೊಂಡರೂ ಅಂಥವರನ್ನು ಈ ಕತ್ತಿಗೆ ಬಲಿಹಾಕಿ ಬಿಡುತ್ತೇನೆ. ಗೊತ್ತಾಯಿತಷ್ಟೇ! ಹೂಂ, ನಿಮ್ಮ ಹತ್ತಿರವಿರುವ ಹಣ, ಬೆರಳಲ್ಲಿರುವ ಉಂಗುರ, ಒಂಟಿ, ನೇವಳ ಎಲ್ಲಾ ತೆಗೆದು ಮರ್ಯಾದೆಯಿಂದ ಇಲ್ಲಿ ಇಡಿರಿ!" ಎಂದು ನೆಲದಲ್ಲಿ ಒಂದು ಬಟ್ಟೆಯನ್ನು ಹಾಸಿದನು.

ಮೂವರು ಪ್ರಯಾಣಿಕರೂ ಗಡಗಡನೆ ನಡುಗುತ್ತ, ತಮ್ಮ ಹತ್ತಿರವಿರುವ ಹಣವನ್ನು ಮತ್ತು

ಆರ್. ಎಸ್. ನಾರಾಯಣ

ಬಂಗಾರದ ವಸ್ತುಗಳನ್ನು ಕಳ್ಳನಿಗೆ ಕೊಡಲು ಹವಣಿಸಿದರು. ಆಗ ಗಾಡಿಯವನು ಕೈಯಲ್ಲಿ ಚಾವಟಿಯನ್ನು ಹಾರಿಸಿ ಛಟೀಲೆಂದು ಶಬ್ದವೆಬ್ಬಿಸಿ, ತೀವ್ರ ಸ್ವರದಲ್ಲಿ, "ಲೋ ! ದಾರೀ ದೋಚುವ ಚುಟಿಸುಣ್ಣನು ನೀನೇನಾ ? ನೀನು ಗಾಡಿಗೆ ಹತ್ತುವಾಗಲೇ ನಿನ್ನ ಕಳ್ಳ ನೋಟ ಗಮನಿಸಿದ್ದೇನೆ. ಆದರೂ ಕಾದು ನೋಡೋಣವೆಂದು ಸುಮ್ಮನಿದ್ದೆ. ಪಾರ್ವತೀಪುರದ ಜಮೀನ್ದಾರರು ನಿನ್ನನ್ನು ಹಿಡಿಯಲಿಕ್ಕಾಗಿ ಕಳುಹಿಸಿರುವ ಗೂಢಚಾರಿ ನಾನೆಂಬುದು ನಿನಗೆ ಗೊತ್ತಾಗಿಲ್ಲ, ಹೌದಾ ! ಇನ್ನು ನಿನ್ನ ಆಟ ಸಾಗದು. ಈ ರಾತ್ರಿಯಲ್ಲಿ ಹೀಗೆ ಹೊರಟವರು ಸಾಧಾರಣ ಪ್ರಯಾಣಿಕರೆಂದುಕೊಂಡು ನೀನು ಮೋಸ ಹೋದೆ ! ಇಂದಿಗೆ ಮುಗಿಯಿತು ನಿನ್ನ ಕಥೆ !" ಎಂದು ಗಾಡಿಯಿಂದ ಹಾರಿ ಮುಂದೆ ಕಾಲಿಟ್ಟನು.

ಜಮೀನ್ದಾರರ ಗೂಢಚಾರಿ ಎಂಬ ಮಾತನ್ನು ಕೇಳಿದ ಕೂಡಲೇ ಕಳ್ಳನ ಶರೀರವು ಥಕ್ಕನೆ ಜುಮುಗುಟ್ಟಿತು. ಅವನು ತನ್ನ ಧೈರ್ಯವನ್ನು ಒಟ್ಟುಗೂಡಿಸಿ ಸಮಾಳಿಸಿಕೊಳ್ಳುವುದರೊಳಗೆ ಗಾಡಿಯವನು ಚಾಟಿಯನ್ನು ಅವನ ಕತ್ತಿಯ ಕೈಯ ಮೇಲೆ ಬೀಸಿದನು. ಅದೇ ಹೊತ್ತಿನಲ್ಲಿ ಗಾಡಿಯಲ್ಲಿದ್ದ ಮೂವರು ಪ್ರಯಾಣಿಕರೂ ಅವನ ಮೇಲೆ ಬಿದ್ದು ಕತ್ತಿಯನ್ನು ಎಳೆದುಕೊಂಡು, ಚಡಮಡನೆ ಹೊಡೆದರು. ಗಾಡಿಯವನು ಹಗ್ಗದಿಂದ ಚುಟಿಸುಣ್ಣನ ಕೈಗಳನ್ನೂ ಕಾಲುಗಳನ್ನೂ ಕಟ್ಟಿಹಾಕಿದನು. ತರುವಾಯ ನಾಲ್ವರೂ ಸೇರಿ ಅವನನ್ನು ಗಾಡಿಯಲ್ಲಿ ಹಾಕಿ ವಿಕ್ರಮಪುರದ ಕಡೆಗೆ ಹೊರಟರು.

ದಾರಿಯಲ್ಲಿ ಪ್ರಯಾಣಿಕರಲ್ಲೊಬ್ಬನು ಗಾಡಿಯವನೊಂದಿಗೆ "ಕಾಡಿನಲ್ಲಿ ದಾರಿ ದೋಚುವ ಈ ಚುಟಿಸುಣ್ಣನನ್ನು ಬಂಧಿಸಲು ನೀವು ಕುದುರೇ ಗಾಡಿ ಹೊಡೆಯುವವನ ವೇಷ ಹಾಕಬೇಕಾಯಿತು ! ಬಹು ಚೆನ್ನಾಗಿ ನಟಿಸಿದಿರಿ ! ತಾವು ಜಮೀನ್ದಾರರ ಗೂಢಚಾರರೆಂದು ನಮಗೆ ಮೊದಲೇ ಗೊತ್ತಾಗಿದ್ದರೆ ನಾವು ಇವನನ್ನು ನೋಡಿ ಅಷ್ಟು ಹೆದರುತ್ತಿರಲಿಲ್ಲ." ಎಂದನು. "ಆಗ ಈ ಚುಟಿಸುಣ್ಣನೂ ನನಗೆ ಸಿಗು



ತ್ತಿದ್ದಿಲ್ಲ. ಇನ್ನಿಬ್ಬರು ಆಳುಗಳು ಈ ಗಾಡಿಯನ್ನು ಅನುಸರಿಸಿ ಬರಬೇಕಿತ್ತು. ಏಕೆ ಬರಲಿಲ್ಲವೋ ? ಅಷ್ಟರೊಳಗೆ ನಿಮ್ಮ ಸಹಾಯದಲ್ಲಿ ಇವನನ್ನು ಕಟ್ಟಿಹಾಕಲು ಸಾಧ್ಯವಾಯಿತು " ಎಂದನು ಗಾಡಿಯವನು.

ವಿಶ್ರಮಪುರವು ಬಂದ ಕೂಡಲೇ ಗಾಡಿಯವನು ಕೋತ್ವಾಲನ ಮನೆಯ ಮುಂದೆ ಗಾಡಿಯನ್ನು ನಿಲ್ಲಿಸಿ, ಬಾಗಿಲು ತಟ್ಟಿದನು. ಬಾಗಿಲು ತೆರೆದು ಕೋತ್ವಾಲನು ಹೊರಗೆ ಬಂದ ಕೂಡಲೇ ಗಾಡಿಯವನೂ ಉಳಿದವರೂ ಚುಟಿಸುಣ್ಣನನ್ನು ಕೋತ್ವಾಲನ ಮುಂದೆ ಕೆಡವಿದರು. " ಭೇಷ್ ಭೇಷ್ ! ನಿನ್ನ ಗಾಡಿಯಲ್ಲಿ ಬಂದವರು ಬಹಳ ಧೈರ್ಯಶಾಲಿಗಳಂತಿದ್ದಾರೆ. ನಾನು ಈ ದೊಡ್ಡ ಕೆಳ್ಳನನ್ನು ಹಿಡಿಯಲು ಎಷ್ಟೋ ಪ್ರಯತ್ನ ಮಾಡಿದೆ. ನೀವು ಹಿಡಿದುಬಿಟ್ಟಿರಿ " ಎಂದನು.

ಕೋತ್ವಾಲನ ಮಾತು ಕೇಳಿ ಪ್ರಯಾಣಿಕರು, " ಅಯ್ಯಾ, ಇವನನ್ನು ಹಿಡಿಯುವಷ್ಟು ಧೈರ್ಯವೂ ಶಕ್ತಿಯೂ ನಮಗೆಲ್ಲಿಯದು ? ಬಂದೀಗಾರನ ವೇಷದಲ್ಲಿರುವ ಪಾರ್ವತೀಪುರದ ಜಮೀನ್ದಾರರ ಗೂಢಚಾರೀ ಉದ್ಯೋಗಸ್ಥರಿಂದಾಗಿ ಇವನು ಸಿಕ್ಕಿಬಿದ್ದ. ಇವರಿಲ್ಲದಿರುತ್ತಿದ್ದರೆ ನಮಗೆ ಅಷ್ಟೊಂದು ಗುಡ್ಡದಂಥ ಧೈರ್ಯ ಬರುತ್ತಿತ್ತೆ ? ನಮ್ಮ ಸೊತ್ತು ಯಾವುದೂ ಹೋಗದಂತೆ ಕಾಪಾಡಿದ್ದಕ್ಕೆ ಇವರಿಗೆ ನಮ್ಮ ಶಕ್ತ್ಯಾನುಸಾರವಾಗಿ ಬಹುಮಾನ ಕೊಡಬೇಕೆಂದಿದ್ದೇವೆ " ಎಂದರು ಬಹಳ ಸಂತೋಷದಿಂದ.

ಅವರು ಹೇಳಿದುದನ್ನು ಕೇಳಿ ಕೋತ್ವಾಲನು ಆಶ್ಚರ್ಯಪಡುತ್ತ ಗಾಡಿಯವನನ್ನು ನೋಡಿ, " ಲೋ, ಲಕ್ಕಪ್ಪಾ ! ಏನೋ ಇದು ? ನೀನು ಜಮೀನ್ದಾರ್ರ ಗೂಢಚಾರಿಯಾದದ್ದು ಯಾವಾಗಿನಿಂದಲೋ ? " ಎಂದನು.

ಗಾಡಿಯವನು ನಡೆದ ಸಮಾಚಾರವನ್ನು ಹೇಳಿ, " ನನಗೆ ಒಂದು ಸೂತ್ರ ಮಾತ್ರ ಗೊತ್ತಿತ್ತು. ಧೈರ್ಯದಿಂದ ಒಬ್ಬನು ಎದ್ದುನಿಂತರೆ, ಉಳಿದವರಿಗೂ ಧೈರ್ಯ ಬರುತ್ತದೆ ಅಂತ. ನಾವು ನಾಲ್ಕು ಜನರಿರುವಾಗ, ಒಬ್ಬನನ್ನು, ಅವನು ಎಷ್ಟು ಜೋರಿನವನಾದರೂ ಹಿಡಿಯದೆ ಹೋದರೆ ನಾಚಿಗೆಯಲ್ಲವೆ ? ಅದಕ್ಕೇ ನಾನು ಜಮೀನ್ದಾರ್ರ ಗೂಢಚಾರೀ ಅಂದೆನು. ಅಷ್ಟೇ ಹೊರತು ಮತ್ತೇನಿಲ್ಲ " ಎಂದನು.

ಕೋತ್ವಾಲನು ಗಾಡಿಯ ಲಕ್ಕಪ್ಪನನ್ನು ಬಹಳವಾಗಿ ಮೆಚ್ಚಿದನು. ಈ ಸಂಗತಿಯನ್ನು ಕೇಳಿದ ಪಾರ್ವತೀಪುರದ ಜಮೀನ್ದಾರರು ಮರುದಿನ ತುಂಬಿದ ಸಭೆಯಲ್ಲಿ ಲಕ್ಕಪ್ಪನ ಧೈರ್ಯವನ್ನೂ, ಸಮಯಸ್ಫೂರ್ತಿಯನ್ನೂ ಶ್ಲಾಘಿಸಿ ಬೆಲೆ ಬಾಳುವ ಬಹುಮಾನಗಳನ್ನು ಅವನಿಗೆ ಕೊಟ್ಟರು.





# ಪಾಪಿಷ್ಠ ಜನ್ಮ

**ಹಿಂದೆ** ಬ್ರಹ್ಮದತ್ತ ರಾಜನು ಕಾಶೀ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಸುತನು ಎಂಬ ಹೆಸರಿನಲ್ಲಿ ಬಡ ಗೃಹಸ್ಥನಾಗಿ ಜನ್ಮವೆತ್ತಿದನು. ಅವನು ಬೆಳೆದು ದೊಡ್ಡವನಾಗಿ ತನ್ನ ಸಂಪಾದನೆಯಿಂದ ತಾಯಿತಂದೆಯರನ್ನು ಪೋಷಿಸಿಕೊಂಡು ಬರುತ್ತಿದ್ದನು. ಕಾಲಕ್ರಮದಲ್ಲಿ ಅವನ ತಂದೆ ತೀರಿಹೋದನು. ತಾಯಿ ಮಾತ್ರವೇ ಅವನ ಪಾಲನೆಯಲ್ಲಿ ಉಳಿದಳು. ಅವನು ಇಡೀ ದಿನ ಕಷ್ಟಪಟ್ಟು ಸಂಪಾದಿಸಿದರೂ ತನಗೂ ತನ್ನ ತಾಯಿಗೂ ಹೊಟ್ಟೆ ತುಂಬ ತಿನ್ನುವಷ್ಟು ದೊರೆಯುತ್ತಿದ್ದಿಲ್ಲ. ಇದರಿಂದ ಸುತನು ಬಹಳ ಕಷ್ಟಪಡುತ್ತಿದ್ದನು. ಹೀಗೆ ಸಂಪಾದನೆ ಸಾಲದೆ ಹೋಗಲು ಕಾರಣ, ಸುತನುವಿಗಿರುವ ದಾನ ಬುದ್ಧಿಯೇ. ಅದರಿಂದಾಗಿ ಅವನಿಗೆ ಉಳಿಯುವುದು ಸ್ವಲ್ಪ ಮಾತ್ರವೇ.

ಆ ದೇಶದ ರಾಜನಿಗೆ ಬೇಟೆಯಲ್ಲಿ ಬಹಳ ಪ್ರೀತಿ. ಅವನು ಆಗಾಗ ಕಾಡಿಗೆ ಹೋಗಿ, ಕಾಡುಪ್ರಾಣಿಗಳನ್ನು ಬೇಟೆಯಾಡುತ್ತಾ ಇರುವನು. ಒಂದು ದಿನ ರಾಜನು ಹಾಗೆ ಬೇಟೆಯಾಡುತ್ತಾ ಒಂದು ಜಿಂಕೆಯನ್ನು ಓಡಿಸಿಕೊಂಡು ಬಹುದೂರ ಹೋಗಿ ಗುಂಪಿನಿಂದ ಬೇರೆಯಾದನು. ಕಡೆಗೆ ಅವನು ಜಿಂಕೆಯನ್ನು ಬಾಣದಿಂದ ಹೊಡೆದು ಬೀಳಿಸಿದನು. ಆದರ ಬಳಿಗೆ ಕುದುರೆಯನ್ನು ಓಡಿಸುವಾಗ, ಕಲ್ಲೆಡವಿ ಕುದುರೆ ಪಾತಳಿಯೊಳಗೆ ಬೀಳುವುದೂ, ರಾಜನು ಈಚೆಗೆ ಹಾರಿ ತಪ್ಪಿಸಿಕೊಳ್ಳುವುದೂ ಒಮ್ಮೆಗೇ ಆಯಿತು. ಸಮೀಪದಲ್ಲಿ ರಾಜನ ಭಟರಾರೂ ಕಾಣಲಿಲ್ಲ. ಆದುದರಿಂದ ರಾಜನೇ ಆ ಜಿಂಕೆಯನ್ನು ಹೆಗಲ ಮೇಲೆ ಹಾಕಿಕೊಂಡು, ತನ್ನವರನ್ನು ಹುಡುಕುತ್ತಾ ಬರತೊಡಗಿದನು.

ಮಧ್ಯಾಹ್ನದ ಹೊತ್ತಿಗೆ ಬಿಸಿಲಿನ ಜಳವು ಜೋರಾಯಿತು. ಓಡೋಡಿ ಬೇಟೆಯಾಡಿದುದರಿಂದಲೂ, ಜಿಂಕೆಯ ಭಾರದಿಂದಲೂ ರಾಜನು ಬಹಳವಾಗಿ ಬಳಲಿದನು. ಅಂತಹ ಸ್ಥಿತಿಯಲ್ಲಿ ಒಂದು ವಿಶಾಲವಾದ ಆಲದ ಮರವು ಕಂಡುಬಂತು. ರಾಜನು ಜಿಂಕೆಯ ಶರೀರವನ್ನು ಅದರ ನೆರಳಿನಲ್ಲಿ ಕೆಳಗೆ ಹಾಕಿ, ವಿಶ್ರಾಂತಿ ತೆಗೆದುಕೊಳ್ಳಲು ತಾನು ಕೂಡಾ ಕುಳಿತುಕೊಂಡನು.

ಮರುಕ್ಷಣದಲ್ಲಿ ರಾಜನ ಇದಿರಿನಲ್ಲಿ ಭಯಂಕರ ಬ್ರಹ್ಮರಾಕ್ಷಸಿಯೊಬ್ಬಳು ಪ್ರತ್ಯಕ್ಷಳಾಗಿ, " ಎಲೋ



ಮಾನವನೇ! ನಿನ್ನನ್ನು ತಿನ್ನುತ್ತೇನೆ!" ಎಂದು ಬಾಯಿ ತೆರೆದು ಕೈಗಳನ್ನು ಚಾಚಿ ಮುಂದಡಿ ಇಟ್ಟಳು.

"ಏನಿದು ಅನ್ಯಾಯ? ಯಾರು ನೀನು? ನನ್ನನ್ನು ತಿನ್ನಲು ನಿನಗೇನು ಅಧಿಕಾರವಿದೆ?" ಎಂದು ಕೇಳಿದನು ರಾಜ.

"ಈ ಆಲದ ಮರವು ನನ್ನ ಮನೆ. ಇದರ ನೆರಳಿಗೆ ಯಾರು ಬಂದರೂ ತಿನ್ನುವ ಅಧಿಕಾರ ನನಗಿದೆ. ಬ್ರಹ್ಮರಾಕ್ಷಸಿಯಾದ ನಾನು ಅಂತಹ ವರವನ್ನು ಪಡೆದಿದ್ದೇನೆ. ಆದುದರಿಂದ ಸಾಯಲು ತಯಾರಾಗು" ಎಂದಳು ಬ್ರಹ್ಮರಾಕ್ಷಸಿ.

ರಾಜನು ಒಂದು ಕ್ಷಣ ಯೋಚಿಸಿ ಬ್ರಹ್ಮರಾಕ್ಷಸಿಯನ್ನು ನೋಡಿ, "ಈ ದಿನ ಮಾತ್ರ ನನ್ನನ್ನು ತಿಂದು ತೇಗಿಬಿಟ್ಟರೆ ಮುಗಿಯಿತೇನು? ನಾಳೆಯಿಂದ ದಿನನಿತ್ಯವೂ ನಿನಗೆ ಆಹಾರ ಬೇಡವೇನು?" ಎಂದು ಕೇಳಿದನು.

"ದಿನಾ ಆಹಾರ ಬೇಕೆಂಬುದು ನಿಜವೇ. ಒಂದೊಂದು ದಿನ ಈ ನೆರಳಿಗೆ ಯಾವ ಪ್ರಾಣಿಯೂ ಬಾರದೆ ಹೋಗವುದೂ ಉಂಟು. ಆ ದಿನ ನನಗೆ ಉಪವಾಸ" ಎಂದಳು ಬ್ರಹ್ಮರಾಕ್ಷಸಿ.

"ಹಾಗೆ ಹೇಳು. ಈ ದಿನ ನನ್ನನ್ನು ತಿನ್ನುವುದರಿಂದ ನಿನ್ನ ಆಹಾರ ಸಮಸ್ಯೆ ತೀರುವುದಿಲ್ಲ. ಈ ಹೊತ್ತಿಗೆ ಈ ಜಿಂಕೆಯನ್ನು ತಿಂದು, ನನ್ನನ್ನು ಹೋಗಲು ಬಿಟ್ಟರೆ ನಿನಗೆ ದಿನನಿತ್ಯವೂ ಆಹಾರ ಸಮಸ್ಯೆ ಇಲ್ಲದಂತೆ ಮಾಡುತ್ತೇನೆ. ನಾನು ಈ ದೇಶದ ರಾಜ. ಆದುದರಿಂದ ನಿನಗೆ ದಿನಾ ಅನ್ನದೊಂದಿಗೆ ಒಬ್ಬ ಮನುಷ್ಯನನ್ನು ಕೂಡಾ ಕಳುಹಿಸುತ್ತೇನೆ" ಎಂದನು ರಾಜ.

ಈ ಮಾತು ಕೇಳಿ ಬ್ರಹ್ಮರಾಕ್ಷಸಿ ಸಂತೋಷದಿಂದ, "ಹಾಗಾದರೆ ನಿನ್ನನ್ನು ಬಿಟ್ಟುಬಿಡುತ್ತೇನೆ. ಆದರೆ ಯಾವ ದಿನವಾದರೂ ಆಹಾರ ಬಾರದೆ ತಪ್ಪಿಹೋದರೆ, ನಾನೇ ನನ್ನ ಕೈಯನ್ನು ನಿನ್ನ ಮನೆಯವರೆಗೆ ಚಾಚಿ ನಿನ್ನನ್ನು ಹಿಡಿದೆಳೆದು ತಿಂದುಬಿಡುತ್ತೇನೆ. ನೆನಪಿರಲಿ!" ಎಂದಳು.

ರಾಜನು ಜಿಂಕೆಯನ್ನು ಬ್ರಹ್ಮರಾಕ್ಷಸಿಗೆ ಬಿಟ್ಟು ತನ್ನ ರಾಜಧಾನಿಗೆ ಹಿಂದಿರುಗಿದನು. ಅನಂತರ ಮಂತ್ರಿಯೊಂದಿಗೆ ನಡೆದ ಎಲ್ಲಾ ಸಂಗತಿಯನ್ನೂ ಹೇಳಿದನು.

"ಮಹಾರಾಜಾ, ಇದಕ್ಕೆ ನೀವೇನೂ ಚಿಂತಿಸಬೇಕಾಗಿಲ್ಲ. ನಮ್ಮ ಬಂದೀಖಾನೆಯೊಳಗೆ ಅನೇಕ ಮಂದಿ ಅಪರಾಧಿಗಳಿದ್ದಾರೆ. ಅವರನ್ನು ದಿನಕ್ಕೆ ಒಬ್ಬೊಬ್ಬರನ್ನಾಗಿ ಆ ಬ್ರಹ್ಮರಾಕ್ಷಸಿಗೆ ಕಳುಹಿಸುತ್ತೇನೆ" ಎಂದನು ಮಂತ್ರಿ.

ಅಂದಿನಿಂದ ಮಂತ್ರಿ ದಿನಕ್ಕೆ ಒಬ್ಬೊಬ್ಬ ಖೈದಿಯನ್ನು, ಅನ್ನಪದಾರ್ಥಗಳೊಂದಿಗೆ ಕಾಡಿನಲ್ಲಿರುವ ಆಲದ ಮರದ ಬುಡಕ್ಕೆ ಕಳುಹಿಸುತ್ತಾ ಬಂದನು. ಬ್ರಹ್ಮರಾಕ್ಷಸಿ ಆ ಖೈದಿಯನ್ನೂ, ಇತರ ಆಹಾರವನ್ನೂ ತಿನ್ನುತ್ತಾ ಬಂದಳು.

ಮೂರು ತಿಂಗಳಲ್ಲಿ ಎಲ್ಲಾ ಖೈದಿಗಳೂ ಖಾಲಿಯಾಗಿ ಹೋದರು. ಇನ್ನೇನು ಮಾಡುವುದೆಂದು ಮಂತ್ರಿಗೆ ಗೊತ್ತಾಗಲಿಲ್ಲ. ಅವನು ರಾಜ್ಯದೊಳಗೆಲ್ಲಾ ಹೀಗೆ ಡಂಗುರ ಹಾಕಿಸಿದನು.

"ಯಾರು ಅನ್ನ ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು, ಕಾಡಿನಲ್ಲಿರುವ ಆಲದ ಮರದ ಬುಡಕ್ಕೆ ಹೋಗಿ, ಬ್ರಹ್ಮರಾಕ್ಷಸಿಗೆ ಬಲಿಯಾಗುವರೋ, ಅವರಿಗೆ ಮಹಾರಾಜರು ಸಾವಿರ ರೂಪಾಯಿ ಬಹುಮಾನ ಕೊಡುತ್ತಾರೆ."

ಈ ಡಂಗುರವು ಬಡವನಾದ ಸುತನುವಿನ ಕಿವಿಗಳಿಗೆ ಭಾಗ್ಯವರ್ಷಣದಂತೆ ಕೇಳಿಸಿತು. "ನಾನು ಎಷ್ಟು ಕಷ್ಟಪಟ್ಟರೂ ಹಣವನ್ನು ಕಣ್ಣಿನಿಂದ ನೋಡಲಾರದಿದ್ದೇನೆ. ಬ್ರಹ್ಮರಾಕ್ಷಸಿಗೆ ಆಹಾರ ಒಯ್ದು ಕೊಟ್ಟರೆ ಇಷ್ಟೊಂದು ಹಣ ಸಿಗುತ್ತದೆ!" ಎಂದು ಸಂತೋಷಪಡುತ್ತ ತಾಯಿಯನ್ನು ನೋಡಿ, "ಅಮ್ಮಾ, ನಾನು ಸಾವಿರ ರೂಪಾಯಿ ತೆಗೆದುಕೊಂಡು ಬ್ರಹ್ಮರಾಕ್ಷಸಿಯ ಬಳಿಗೆ ಆಹಾರ ತೆಗೆದುಕೊಂಡು ಹೋಗುತ್ತೇನೆ. ಆ ಹಣದಿಂದ ನಿನ್ನ ಜೀವನ ಸುಖವಾಗಿ ಕಳೆಯುತ್ತದೆ" ಎಂದನು.

"ಈಗ ನನಗೇನು ಕಡಿಮೆಯಾಗಿದೆಯಪ್ಪಾ? ನಾನು ಸುಖವಾಗಿಯೇ ಇದ್ದೇನೆ. ನೀನು ಹಾಗೆಲ್ಲಾ ಹೋಗಬೇಕಾದ ಅಗತ್ಯವೇ ಇಲ್ಲ. ಸುಮ್ಮನೆ ಪ್ರಾಣಕ್ಕೆ ತಂದುಕೊಳ್ಳುವ ಕೆಲಸ ನಮಗೆ ಬೇಡಪ್ಪಾ. ಬಡತನವೇ ನಮಗೆ ಅಭ್ಯಾಸವಾಗಿ ಹೋಗಿದೆ ಮಗನೇ" ಎಂದಳು ತಾಯಿ.

"ನನಗೆ ಯಾವ ಅಪಾಯವೂ ಬರುವುದಿಲ್ಲ. ನಾನು ಕ್ಷೇಮವಾಗಿ ಹಿಂದಿರುಗಿ ಬರುತ್ತೇನೆ. ಸರಿಯಷ್ಟೆ?" ಎಂದು ಹೇಳಿ ಸುತನು ತಾಯಿಯನ್ನು ಒಪ್ಪಿಸಿ, ರಾಜನ ಬಳಿಗೆ ಹೊರಟನು.

"ಮಹಾರಾಜಾ, ನನಗೆ ಪಾದರಕ್ಷೆಗಳನ್ನೂ, ಕೊಡೆಯನ್ನೂ, ಕತ್ತಿಯನ್ನೂ, ಒಂದು ಬಂಗಾರದ



ಪಾತ್ರವನ್ನೂ ಕೊಡಿಸಿರಿ. ನಾನು ಕಾಡಿನಲ್ಲಿರುವ ಬ್ರಹ್ಮರಾಕ್ಷಸಿಯ ಆಲದ ಮರದ ಬುಡಕ್ಕೆ ಆಹಾರ ತೆಗೆದುಕೊಂಡು ಹೋಗುತ್ತೇನೆ" ಎಂದು ಸುತನು ರಾಜನೊಂದಿಗೆ ಹೇಳಿದನು.

"ಅನ್ನ ತೆಗೆದುಕೊಂಡು ಹೋಗುವಾಗ ಇವೆಲ್ಲಾ ಏತಕ್ಕೆ?" ಎಂದು ರಾಜನು ಕೇಳಿದನು.

"ಬ್ರಹ್ಮರಾಕ್ಷಸಿಯನ್ನು ಅಲ್ಲಿಂದ ಓಡಿಸಲಿಕ್ಕೆ!" ಎಂದನು ಸುತನು.

ಹೇಳಿದಂತೆ ಸುತನು ಕತ್ತಿ ಧರಿಸಿ, ಪಾದರಕ್ಷೆಗಳನ್ನು ಮೆಟ್ಟಿ, ಕೊಡೆಹಿಡಿದು, ಬಂಗಾರದ ಪಾತ್ರದಲ್ಲಿ ಆಹಾರ ಪದಾರ್ಥಗಳನ್ನು ಇಟ್ಟುಕೊಂಡು ಮಧ್ಯಾಹ್ನದ ಹೊತ್ತಿಗೆ ಬ್ರಹ್ಮರಾಕ್ಷಸಿಯ ಆಲದ ಮರದ ಹತ್ತಿರ ಹೋದನು. ಅದರ ನೆರಳಿಗೆ ಕಾಲಿಡದೆ ಬದಿಯಲ್ಲಿ ತನ್ನ ಕೊಡೆಯ ನೆರಳಿನಲ್ಲಿ ನಿಂತನು.

ಅವನನ್ನು ಕಾಯುತ್ತ ನೋಡಿಕೊಂಡಿದ್ದ ಬ್ರಹ್ಮರಾಕ್ಷಸಿ, "ಬಿಸಿಲಿನಲ್ಲಿ ಬಹುದೂರದವರೆಗೆ ನಡೆದು

ಬಂದು, ನೆರಳಿಗೆ ಬಾರದೆ ಬಿಸಿಲಿನಲ್ಲೇ ನಿಂತೆಯೇಕೆ ? ಆಲದ ನೆರಳಿಗೆ ಬಂದು ವಿಶ್ರಾಂತಿ ತೆಗೆದುಕೋ " ಎಂದಳು.

"ಇಲ್ಲಯಿಲ್ಲ ! ನಾನು ಬೇಗನೇ ಹಿಂದಿರುಗಿ ಹೋಗಬೇಕು. ಇಕೋ, ನಿನಗೆ ಆಹಾರ ತಂದಿದ್ದೇನೆ. ತೆಗೆದುಕೋ " ಎನ್ನುತ್ತ ಸುತನು ಬಂಗಾರದ ಪಾತ್ರವನ್ನು ಬಿಸಿಲಿನಲ್ಲಿಟ್ಟು, ಕತ್ತಿಯಿಂದ ಆ ಪಾತ್ರವನ್ನು ಆಲದ ನೆರಳಿಗೆ ದೂಡಿದನು.

ಸುತನುವಿನ ಯುಕ್ತಿಯನ್ನು ನೋಡಿ ಬ್ರಹ್ಮರಾಕ್ಷಸಿ ಮಹಾ ಕೋಪದಿಂದ, "ನಾನು ಆಹಾರವನ್ನೂ ಆಹಾರ ತಂದವನನ್ನೂ ತಿನ್ನುತ್ತೇನೆ. ಬಾ ಮುಂದೆ !" ಎಂದು ಹೂಂಕರಿಸಿದಳು.

"ನೀನು ನನ್ನನ್ನು ತಿನ್ನಲು ಸಾಧ್ಯವೇ ಇಲ್ಲ. ನಾನು ನಿನ್ನ ಮರದ ನೆರಳಿಗೆ ಬರಲೂ ಇಲ್ಲ, ನನ್ನನ್ನು ತಿನ್ನಲು ನಿನಗೆ ಯಾವ ಅಧಿಕಾರವೂ ಇಲ್ಲ " ಎಂದನು ಸುತನು.

"ಹಸಿಹಸೀ ಮೋಸ ! ನನಗೆ ನಿನ್ನೊಂದಿಗೆ ಏಕೆ ಮಾತು ? ರಾಜನನ್ನೇ ಎಳೆದು ತಿನ್ನುತ್ತೇನೆ " ಎಂದು ಬ್ರಹ್ಮರಾಕ್ಷಸಿ ಚೀರಿದಳು.

"ರಾಜನು ಮಾತು ತಪ್ಪಿದರೆ ತಾನೇ ಅವನನ್ನು ಎಳೆದು ತಿನ್ನಲಿಕ್ಕೆ ? ನೀನು ಮಹಾ ಪಾಪ ಮಾಡಿ ಇಂತಹ ಹಾಳುಜನ್ಮ ಎತ್ತಿದ್ದೀ. ಬ್ರಹ್ಮರಾಕ್ಷಸಿಯಾಗಿ ಆಲದ ಮರದಲ್ಲಿ ಬಂದಿನಿಯಾಗಿದ್ದೀ. ಇಷ್ಟೊಂದು ನೀಚ ಬಾಳಿನಲ್ಲಿ ಕೂಡಾ ನಿನಗೆ ಬುದ್ಧಿ ಬರಬೇಡವೆ ? ಮನುಷ್ಯರನ್ನು ಕೊಂದು ಇನ್ನಷ್ಟು ಪಾಪ ಮಾಡಿ ಎಂದೆಂದಿಗೂ ಹೀಗೆಯೇ ಇರುವಿಯಾ ? ಇನ್ನಾದರೂ ಬುದ್ಧಿ ತಂದುಕೊಂಡು ಈ ಪಾಪಿಷ್ಠ ಜನ್ಮದಿಂದ ಮುಕ್ತಳಾಗು !" ಎಂದು ಸುತನು ಬ್ರಹ್ಮರಾಕ್ಷಸಿಗೆ ಬುದ್ಧಿ ಹೇಳಿದನು.

ಬ್ರಹ್ಮರಾಕ್ಷಸಿ ವಿಚಾರದಿಂದ, "ಹಾಗಾದರೆ ನಾನೇನು ಮಾಡಬೇಕು ? ಒಳ್ಳೆಯ ಜನ್ಮ ನನಗೆ ಹೇಗೆ ಬರುತ್ತದೆ ? " ಎಂದು ಕೇಳಿದಳು.

"ನಿನಗೆ ದಿನಾ ಆಹಾರ ಕಳುಹಿಸುವ ಏರ್ಪಾಡು ಮಾಡುತ್ತೇನೆ. ಪ್ರಾಣಿಗಳನ್ನು ಕೊಂದು ತಿನ್ನುವ ಅಭ್ಯಾಸ ಬಿಡು. ಬೇಗದಲ್ಲೇ ನಿನಗೆ ಮುಕ್ತಿ ಸಿಗುವ ಹಾಗೆ ನಾನು ದೇವರನ್ನು ಬೇಡಿಕೊಳ್ಳುತ್ತೇನೆ. ನೀನೂ ಹಾಗೆಯೇ ಕೋರಿಕೋ " ಎಂದನು ಸುತನು.

ಬ್ರಹ್ಮರಾಕ್ಷಸಿ ಹಾಗೆಯೇ ಒಪ್ಪಿದಳು.

ಹಿಂದಿರುಗಿ ಬಂದ ಸುತನುವನ್ನು ನೋಡಿ ರಾಜನು ಆಶ್ಚರ್ಯಪಟ್ಟನು. ಅವನು ಹೇಳಿದ ಸಂಗತಿಯನ್ನು ತಿಳಿದು ರಾಜನು ಆತ್ಮಾನಂದಗೊಂಡು, ಸುತನುವನ್ನು ತನ್ನ ಸೇನಾಪತಿಯಾಗಿ ನಿಯಮಿಸಿ, ಅವನ ಸಲಹೆಗಳನ್ನು ಕೇಳುತ್ತ ಸುಖವಾಗಿ ರಾಜ್ಯಪಾಲನೆಯನ್ನು ಮಾಡಿದನು.



# ಶ್ರೀಮತಿ ಇಂದಿರಾಗಾಂಧಿ



ನೀನು ಅಲಹಾಬಾದಿನಲ್ಲಿ, ನಿನ್ನ ಅಮ್ಮ ಮಲಕಾ ಜೈಲಿನಲ್ಲಿ ಕುಳಿತಿರುವ ಈ ಸಮಯದಲ್ಲಿ ನಾನು ಇಲ್ಲಿ ನೈನೀ ಜೈಲಿನಲ್ಲಿದ್ದೇನೆ, ಹೀಗೆ ಒಬ್ಬರನ್ನೊಬ್ಬರು ಅಗಲಿ ದೂರದಲ್ಲಿರುವುದು ನಮಗೆ ಎಷ್ಟೋ ಕಷ್ಟವಾಗಿದೆಯಲ್ಲವೆ? ಆದರೂ ನಾವು ಮೂವರೂ ಕಲೆತುಕೊಳ್ಳುವ ದಿನಗಳನ್ನು ನೆನೆಸಿಕೋ! ನಾನೂ ಆ ದಿನವನ್ನೇ ಇದಿರು ನೋಡಿಕೊಂಡಿದ್ದೇನೆ. ಈ ಆಲೋಚನೆಯೇ ನನ್ನ ಮನಸ್ಸನ್ನು ತಿಳಿಗೊಳಿಸಿ ಸಂತೋಷಪಡಿಸುತ್ತದೆ.

ಹೀಗೆ ಒಬ್ಬ ತಂದೆ, ತಾಯಿ ಕೂಡಾ ಜೈಲಿನಲ್ಲಿರುವಾಗ ತನ್ನ ಮಗಳಿಗೆ ಬರೆದನು. ಆ ತಂದೆಯೇ ಜವಹರ್‌ಲಾಲ್ ನೆಹ್ರೂ. ಮಗಳೇ ಇಂದಿರಾ. ೧೯೧೭ನೇ ಸಂವತ್ಸರ ನವಂಬರ್ ೧೯ರ ದಿನ ಜನ್ಮ ತಾಳಿದ ಇಂದಿರಾ, ಬೆಳೆದು ದೊಡ್ಡವಳಾಗಿ ಭಾರತದ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯಾಗಿ, ಇಪ್ಪತ್ತನೆಯ ಶತಮಾನದ ನಾಯಕಿಯಾಗಿ ಹೆಸರು ಪಡೆದರು.



ಸುಪ್ರಸಿದ್ಧರಾದ ಮೋತೀಲಾಲ್ ನೆಹ್ರೂ ಅವರ ಮೊಮ್ಮಗಳಾಗಿ, ಜವಹರ್‌ಲಾಲ್ ನೆಹ್ರೂ ಅವರ ಮಗಳಾಗಿ ಜನ್ಮಿಸಿದರೂ, ಆಕೆ ಭೋಗಭಾಗ್ಯಗಳಲ್ಲಿ ಮೆರೆದಳೆನ್ನುವಂತಿಲ್ಲ. ಏಕೆಂದರೆ ಅವು ಕ್ಲಿಷ್ಟಕರವಾದ ದಿನಗಳು. ತಂದೆಗೆ ಭಾರತ ದೇಶದ ಸ್ವಾತಂತ್ರ್ಯವೇ ಪ್ರಧಾನ ಲಕ್ಷ್ಯವಾಗಿದ್ದಿತು. ಆಕೆಯ ತಾಯಿ ತಂದೆಗೆ ಅನುಕೂಲವಾಗಿ ನಿಂತವಳು. ಆದುದರಿಂದ ಆಕೆ ಯಾವಾಗಲೂ ಚಿಂತೆ ಹಾಗು ಕಷ್ಟಗಳ ಹೊರತು ಐಶ್ವರ್ಯ ಸುಖಗಳನ್ನು ಅನುಭವಿಸಲಾರದೆ ಹೋದಳು.



೧೯೩೬ನೇ ಸಂವತ್ಸರದಲ್ಲಿ ಇಂದಿರಾಳ ತಾಯಿ ಕಮಲಾ ನೆಹ್ರೂವನ್ನು ಅಗಲಿದಳು. ಅಂದಿನಿಂದ ಇಂದಿರಾ ತನ್ನ ತಂದೆಗೆ ತಾಯಿಯಾಗಿ, ಅವರು ೧೯೬೪ನೇ ಸಂವತ್ಸರದಲ್ಲಿ ಕಾಲಧರ್ಮ ಹೊಂದುವವರೆಗೂ ಅವ್ಯಾಜವಾದ ಅನುರಾಗವನ್ನು ಬಸಿದಳು. ಗಂಡ ಫಿರೋಜ್ ಗಾಂಧಿ, ಮಕ್ಕಳು ರಾಜೀವ್, ಸಂಜಯ್‌ಗಳ ಮೇಲೆ ತನ್ನ ಮಾತೃ ಬಾಧ್ಯತೆಗಳನ್ನು ನಿರ್ವಹಿಸುತ್ತ ಆಕೆ ತಂದೆಗೆ ಜತೆಯಾಗಿ ನಿಂತಳು. ಆಕೆಯ ಆದರಣೆ, ಆಪ್ಯಾಯತೆ, ಸಂರಕ್ಷಣೆ ಸಲಹೆಗಳು ನೆಹ್ರೂ ನಮ್ಮ ದೇಶದ, ಏಸಿಯಾ ಖಂಡದ, ಪ್ರಪಂಚದ ಅಭ್ಯುನ್ನತಿಗೆ ಇನ್ನಿಷ್ಟು ಕಾರ್ಯವೆಸಗಲು ಎಷ್ಟೋ ಸಹಾಯವಾಯಿತು.

ಅಚಂಚಲವಾದ ಧೈರ್ಯ. ಮಾತೃ ದೇಶಾಭಿಮಾನ, ಇಂದಿರಾಳಿಗೆ ಜನ್ಮತಃ ಬಂದುವು. ತಂದೆಯ ಸಾಹಚರ್ಯವು ಆಕೆಗೆ ಮತ್ತಿಷ್ಟು ಅನುಭವವನ್ನೂ,









Photographs: Courtesy 'Hindustan Times'

ವಿವೇಕವನ್ನೂ ಪ್ರಸಾದಿಸಿತು. ತನ್ನ ಗಂಡನೂ, ಚಿಕ್ಕ ಕುಮಾರನೂ ಮರಣ ಹೊಂದಿದ ವಿಷಾದ ಘಳಿಗೆಗಳಲ್ಲಿ ಆಕೆ ತೋರಿಸಿದ ಆತ್ಮಸ್ಥೈರ್ಯವು ನಿರುಪಮಾನವಾದುದು. ಮತ್ತೆ ಕೆಲವು ರಾಜಕೀಯ, ರಾಷ್ಟ್ರೀಯ ಸಮಸ್ಯೆಗಳು ಇದಿರಾದಾಗ ಕೂಡಾ ಆಕೆ ಅಂತಹ ಸಹನೆಯನ್ನೇ ತೋರಿಸಿದರು !

ಇದೇ ಕಳೆದ ಅಕ್ಟೋಬರ್ ೩೧ರ ದಿನ ಇಂದಿರಾ ಗಾಂಧಿ ತನ್ನ ದೇಶಕ್ಕಾಗಿ ಪ್ರಾಣಾಹುತಿ ಗೈಯಲ್ಪಟ್ಟರು. ಆಕೆ ಎಲ್ಲರನ್ನೂ ಪ್ರೇಮಿಸಿದವರು. ಮಕ್ಕಳ ಮೇಲೆ ಅವರಿಗೆ ಅತ್ಯಂತ ಪ್ರೀತಿ. 'ಚಂದಮಾಮ'ವನ್ನು ಕೂಡಾ ಆಕೆ ಎಷ್ಟೋ ಮೇಲ್ಮಟ್ಟವನ್ನಾಗಿ ಭಾವಿಸಿದ್ದರು. "ಪ್ರಕೃತಿಯ ಅಂದಚಂದಗಳನ್ನು, ಪ್ರಾಪಂಚಿಕರ ಅದ್ಭುತವಾದ ಆಲೋಚನೆಗಳನ್ನು ಹೃದಯಗಳಿಗೆ ಪರಿಚಯ ಮಾಡುವ ಪುಸ್ತಕಗಳೂ, ಪತ್ರಿಕೆಗಳೂ ನಮ್ಮ ಬಾಲರಿಗೆ ಬೇಕು. ಬಾಲರಿಗಾಗಿ ಹೊರಡುವ ಪ್ರಕಟನೆಗಳು ಎಳೆಯರ ಊಹನಾ ಶಕ್ತಿಯನ್ನೂ, ಸೌಂದರ್ಯ ದೃಷ್ಟಿಯನ್ನೂ, ಧೈರ್ಯ ಸಾಹಸಗಳನ್ನೂ ಬೆಳೆಯಿಸುವಂತಿರಬೇಕು. ಆದರೊಂದಿಗೆ ಅವು ತಮ್ಮ ಸುತ್ತಲೂ ಇರುವ ಸಮಾಜದೊಂದಿಗೂ, ಪ್ರಪಂಚದೊಂದಿಗೂ ಸಖ್ಯತೆಯಿಂದ, ಸತ್ಸಂಬಂಧತೆಯಿಂದ ಜೀವಿಸುವ ವಿಧದಲ್ಲಿ ಬೋಧಿಸುವಂತಿರಬೇಕು, ಚಂದಮಾಮದ ಉತ್ತರೋತ್ತರ ವಿಜಯಕ್ಕೆ ನನ್ನ ಶುಭಾಕಾಂಕ್ಷೆಗಳನ್ನು ಒಪ್ಪಿಸುತ್ತೇನೆ" ಎಂದು ಆಕೆ ತಿಳಿಸಿದ್ದಾರೆ.

'ಚಂದಮಾಮ' ಸಂಸ್ಕೃತದಲ್ಲಿಯೂ ಹೊರಡುವುದೆಂದು ಗೊತ್ತಾದಾಗ ಆಕೆ ಹೀಗೆ ಬರೆದರು : "ಸಂಸ್ಕೃತವು ಭಾರತೀಯ ಸಂಸ್ಕೃತಿಗೆ ಮೂಲಾಧಾರವಾದುದು. ನಮ್ಮ ಹಲವಾರು ಪ್ರಾಂತೀಯ ಭಾಷೆಗಳಿಗೆ ಸಂಸ್ಕೃತವು ತಾಯಿಯಂತಹದು. ಆ ಭಾಷೆಯ ಸಂಪತ್ತು ಯುವತೀ ಯುವಕರಿಗೆ ಪರಿಚಯವಾಗಬೇಕು, ಸಂಸ್ಕೃತ 'ಚಂದಮಾಮ'ಕ್ಕೆ ನನ್ನ ಶುಭಾಕಾಂಕ್ಷೆಗಳನ್ನು ತಿಳಿಸುತ್ತೇನೆ"

ಇಂದಿರಾ ಗಾಂಧಿಯವರ ಪ್ರೇಮ, ವಿವೇಕ, ನಮಗೆ ಶಾಶ್ವತವಾದ ಪ್ರೇರಣೆಯಾಗಿ ಭಾಸಿಸುತ್ತದೆ. ಅದಕ್ಕಾಗಿ ನಾವು ಹೆಮ್ಮೆಯಿಂದ ಕೃತಜ್ಞತಾ ಭಾವದಿಂದ ನಿರಂತರವೂ ಆಕೆಯನ್ನು ಜ್ಞಾಪಕದಲ್ಲಿಟ್ಟುಕೊಳ್ಳುತ್ತೇವೆ.



# JOIN THE MALTOVA CLUB!

## ಹೆಚ್ಚಿನ ರ್‍ಯಾಂಕ್‌ಗೆ ಮತ್ತು ಹೆಚ್ಚಿನ ಬಹುಮಾನಗಳಿಗೆ ಸರಳ ಮಾರ್ಗಸೂಚಿ!

☆ ಯಾವುದೇ 3 (ಡೂಪ್ಲಿಕೇಟ್‌ಗಳೂ) ತಂಡದ ಸದಸ್ಯರ ಚಿತ್ರಗಳಿಗೆ —ಮಾಲ್ಟೋವಾ ಕ್ಲಬ್‌ನಲ್ಲಿ ಮಾಲ್ಟೋವಾ ಪ್ರೈವೇಟ್ ರ್‍ಯಾಂಕ್ ಬ್ಯಾಡ್ಜ್ ಮತ್ತು ಐಡೆಂಟಿಟಿ ಕಾರ್ಡ್ ದೊರೆಯುತ್ತದೆ



4 ವಿಭಿನ್ನ ತಂಡದ ಸದಸ್ಯರುಗಳ ಚಿತ್ರಗಳಿಗೆ —ಮಾಲ್ಟೋವಾ ಪ್ರೈವೇಟ್ ರ್‍ಯಾಂಕ್ ಮತ್ತು ಫ್ರಿಸ್‌ಬೀ

5 ವಿಭಿನ್ನ ತಂಡದ ಸದಸ್ಯರುಗಳ ಚಿತ್ರಗಳಿಗೆ ಮಾಲ್ಟೋವಾ ಕಾರ್ಪೊರಲ್ ರ್‍ಯಾಂಕ್ ಮತ್ತು ಒಂದು ಕ್ರಿಕೆಟ್ ದಾಂಡು ಅಥವಾ ಬ್ಯಾಡ್‌ಮಿಂಟನ್ ಸೆಟ್





ಎಲ್ಲ 6 ವಿಭಿನ್ನ ತಂಡದ ಸದಸ್ಯರುಗಳ ಚಿತ್ರಗಳಿಗೆ —ಮಾಲ್ಟೋವಾ ಕ್ಯಾಪ್ಟನ್ ರ್‍ಯಾಂಕ್ ಮತ್ತು ಸೂಪರ್ ಸ್ಪೋರ್ಟ್ಸ್ ಬೈಸಿಕಲ್ ಬಿಎಸ್‌ಎ-ಎಸ್‌ಎಲ್‌ಆರ್

**ಇಲ್ಲಿದೆ ನೋಡಿ, ಮಕ್ಕಳಿಗಾಗಿ ಬಹುದೊಡ್ಡ ಸುದ್ದಿ!**

**ಕಿರಿಕಿರಿ ಬೇಡ. ಪ್ರವೇಶ ಶುಲ್ಕವಿಲ್ಲ ನೀವು ಮಾಡಬೇಕಾದ್ದು ಇಷ್ಟೇ:**

ನಿಮ್ಮ ನೆಚ್ಚಿನ ನ್ಯಾಚುರಲ್ ಪೇಯ, ಮಾಲ್ಟೋವಾದ 500 ಗ್ರಾಂನ ಕನಿಷ್ಠಪಕ್ಷ ಮೂರು ಜಾಡಿಗಳನ್ನು ಕೊಂಡುಕೊಳ್ಳಿ. ಪ್ರತಿಯೊಂದು 500 ಗ್ರಾಂ ಜಾಡಿಯ ಲೇಬಲ್ ಹಾಗೂ ಒಳಗಿನ ಪ್ರತಿ ರೀಫಿಲ್ ಪ್ಯಾಕ್‌ನಲ್ಲೂ ಮಾಲ್ಟೋವಾ ತಂಡದ ಸದಸ್ಯರೊಬ್ಬರ ಚಿತ್ರವಿರುತ್ತದೆ. ಇವರಲ್ಲಿ ಒಟ್ಟು 6 ಚಿತ್ರಗಳಿರುತ್ತವೆ. 5 ಮಕ್ಕಳದ್ದು ಹಾಗೂ ಒಂದು ಮ್ಯಾಜಿಕ್ ಆನೆಯದು. ನೀವೀಗ ಈ ಚಿತ್ರವನ್ನು ಕತ್ತರಿಸಿಟ್ಟುಕೊಳ್ಳಿ ಹಾಗೂ ಇಂಥ ಮಾಲ್ಟೋವಾ ತಂಡದ ಚಿತ್ರಗಳ ಸಂಗ್ರಹವನ್ನು ಪ್ರಾರಂಭಿಸಿ. ಇಂಥ ಮೂರು ಚಿತ್ರಗಳು ಉಚಿತವಾಗಿ ನಿಮ್ಮನ್ನು ಮಾಲ್ಟೋವಾ ಕ್ಲಬ್‌ನ ಹೆಮ್ಮೆಯ ಸದಸ್ಯನನ್ನಾಗಿ ಮಾಡುತ್ತವೆ. ನವೀನ, ಉತ್ತೇಜಕ ಮತ್ತು ಆನಂದದಾಯಕವಾದ ವಿಶೇಷ ಹಾಗೂ ಪ್ರತಿಷ್ಠಿತ ಬ್ಯಾಡ್ಜ್ ಮತ್ತು ಗುರುತಿನ ಕಾರ್ಡ್ ನಿಮಗೆ ಸಿಗುತ್ತವೆ. ಮೂರಕ್ಕೆ ನಿಲ್ಲಿಸಬೇಡಿ. ಏಕೆಂದರೆ ಹೆಚ್ಚಿಗೆ ಸಂಗ್ರಹಿಸಿದಷ್ಟು ಸದಸ್ಯತ್ವದ ರ್‍ಯಾಂಕ್ ಹೆಚ್ಚುತ್ತದೆ ಹಾಗೂ ದೊಡ್ಡ ಬಹುಮಾನಗಳು ಸಿಗುತ್ತವೆ.

**ಈ ಬಗ್ಗೆಯ ಎಲ್ಲ ವ್ಯವಹಾರಗಳಿಗೆ ಹಾಗೂ ಕೊನೆಯ ದಿನಾಂಕ ಡಿಸೆಂಬರ್ 31-12-1984.**

ಕ್ಲಬ್ ಸದಸ್ಯತ್ವ ಮತ್ತು ಗಿಫ್ಟ್‌ಗಳಿಗಾಗಿ, ನಿಮ್ಮ ಹೆಸರು ಮತ್ತು ವಿಳಾಸಗಳನ್ನು ದಪ್ಪಕ್ಷರಗಳಲ್ಲಿ ಇಂಗ್ಲೀಷಿನಲ್ಲಿ ಬರೆದು ಚಿತ್ರಗಳ ಸೆಟ್‌ನೊಂದಿಗೆ ಈ ವಿಳಾಸಕ್ಕೆ ಕಳಿಸಿ.

**The Maltova Club**
Jagatjit Industries Ltd
5th floor, Bhandari House
91 Nehru Place New Delhi 110 019.




**JIL JAGATJIT INDUSTRIES LIMITED**

## ವಿಟಮಿನ್-ಭರಿತ ಮಾಲ್ಟೋವಾ: ಆರೋಗ್ಯ, ಬಲ ಮತ್ತು ಶಕ್ತಿಗಾಗಿ

SIMOES-D/JIL/CP/84/KAN

# ಸ್ವಾತಂತ್ರ್ಯ ಸಮರ

ಪ್ರಾಚೀನವಾದ ಸಂಸ್ಕೃತಿ ಸಂಪ್ರದಾಯಗಳಿಗೆ ಪ್ರಸಿದ್ಧಿ ಪಡೆದ ಸುವಿಶಾಲವಾದ ಭಾರತ ದೇಶವನ್ನು ಕೆಲಮಂದಿ ವಿದೇಶೀಯರು, ಪಾಲಿಸುವುದಕ್ಕೆ ವ್ಯತಿರೇಕವಾಗಿ, ದೇಶದಲ್ಲೆಲ್ಲಾ ನವಚೈತನ್ಯವು ಎದ್ದು ವ್ಯಾಪಿಸತೊಡಗಿತು. ಇಂಗ್ಲೇಂಡಿನಲ್ಲಿ ಓದಿಕೊಳ್ಳುತ್ತಿದ್ದ ಭಾರತೀಯ ಯುವಕರು ಕೆಲವರು 'ಲೋಟಸ್ ಅಂಡ್ ದಿ ಡಾಗರ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಸ್ವತಂತ್ರ್ಯಕ್ಕಾಗಿ ಕಾರ್ಯ ಮಾಡತೊಡಗಿದರು.

ಮಹಾರಾಷ್ಟ್ರದಲ್ಲಿ ಪ್ಲೇಗುವ್ಯಾಧಿ ಸಂಭವಿಸಿದಾಗ ಬ್ರಿಟಿಷ್ ಪೋಲೀಸರು ಪ್ರಜೆಗಳನ್ನು ಹಿಂಸಿಸಿ, ಅವಮಾನಿಸುವುದನ್ನು ಸಹಿಸಲಾಗದೆ ಬಾಲ ಗಂಗಾಧರ ತಿಲಕರು (೧೮೫೬-೧೯೨೦) ತೀವ್ರವಾದ ವ್ಯತಿರೇಕೋದ್ಯಮವನ್ನು ಪ್ರಾರಂಭಿಸಿದರು. ಬಹುಬೇಗದಲ್ಲೇ ಅವರು ಭಾರತೀಯರ ಗೌರವಾದರಗಳಿಗೆ ಪಾತ್ರರಾಗಿ ಬಹು ದೊಡ್ಡ ನಾಯಕರಾದರು.





೧೯೦೭ ರಲ್ಲಿ ಸೂರತ್ತಿನಲ್ಲಿ ನಡೆದ ದೇಶೀಯ ಕಾಂಗ್ರೆಸ್ ಮಹಾಸಭೆಯಲ್ಲಿ ಸಂಪೂರ್ಣ ಸ್ವಯಂ ಪರಿಪಾಲನೆಯೇ ಕಾಂಗ್ರೆಸ್ಸಿನ ಲಕ್ಷ್ಯವೆಂದು ಪ್ರಕಟಿಸಬೇಕೆಂದು ತಿಲಕರೂ, ಅರವಿಂದರೂ ಕೇಳಿಕೊಂಡರು. ಅದಕ್ಕೆ ಕೆಲವು ನಾಯಕರು ಹಿಂಜರಿದುದರಿಂದ, ಅರವಿಂದರ ಅಧ್ಯಕ್ಷತೆಯಲ್ಲಿ ಬೇರೆಯಾಗಿ ಒಂದು ಸಭೆ ನಡೆಯಿತು. ಆ ಸಭೆಯಲ್ಲಿ ತಿಲಕರು ತಮ್ಮ ತೀರ್ಮಾನವನ್ನು ಪ್ರತಿಪಾದಿಸಿದರು.



ಬೇಗದಲ್ಲೇ ಅರವಿಂದರು ಅತಿವಾದ ಪಕ್ಷಕ್ಕೆ ನಾಯಕರಾದರು. ಬ್ರಿಟಿಷ್ ವಸ್ತುಗಳನ್ನು ಬಹಿಷ್ಕರಿಸುವುದು, ಪಂಚಾಯಿತಿಗಳ ಮೂಲಕ ತಗಾದೆಗಳನ್ನು ಪರಿಷ್ಕರಿಸಿಕೊಳ್ಳುವುದು, ದೇಶೀಯ ವಿದ್ಯಾವಿಧಾನ, ಪ್ರಜೆಗಳ ಸೈನ್ಯ ಮೊದಲಾದುವುಗಳನ್ನು ಸಂಘಟಿಸಿಕೊಳ್ಳುವುದು, ಇಂತಹವುಗಳಿಗೆ ಸಂಬಂಧಿಸಿದ ನಿನಾದಗಳಿಂದ ಬ್ರಿಟಿಷ್ ಅಧಿಕಾರವನ್ನು ಅವರು ತೀವ್ರವಾಗಿ ವ್ಯತಿರೇಕಿಸಿದರು. ಬ್ರಿಟಿಷ್ ಪೋಲೀಸರು ಅತಿವಾದಿಗಳ ಮೇಲೆ ದಾಳಿ ನಡೆಸಿ ತೀವ್ರವಾಗಿ ಹಿಂಸಿಸತೊಡಗಿದರು.

೧೯೧೦ನೇ ಸಂವತ್ಸರದಲ್ಲಿ ಅರವಿಂದರು ರಾಜಕೀಯ ರಂಗವನ್ನು ಬಿಟ್ಟು, ಆಧ್ಯಾತ್ಮಿಕ ಜೀವನವನ್ನು ಗ್ರಹಿಸಿಕೊಂಡರು. ಆದರೂ ಅವರಿಂದ ಪ್ರಾರಂಭಿಸಲ್ಪಟ್ಟ ಸಿದ್ಧಾಂತಗಳು, ವಿಪ್ಲವ ಚೈತನ್ಯವು ಸ್ವಾತಂತ್ರ್ಯದ ಉದ್ಯಮವನ್ನು ಮುಂದೆ ಮುಂದೆ ನಡೆಸಿಕೊಂಡೇ ಹೋದುವು. ವಿಪ್ಲವನಾಯಕನಾದ ಬಾಘಾ ಜಾಟಿನ್ ಅವನ ಅನುಚರರು ಬಾಲಾಸೋರ್ ಹತ್ತಿರದಲ್ಲಿ ಬ್ರಿಟಿಷರೊಂದಿಗೆ ಹೋರಾಡಿ ಪ್ರಾಣ ಸಮರ್ಪಣೆ ಮಾಡಿದರು.





ಕೆನಡಾದಲ್ಲಿದ್ದ ಪಂಜಾಬಿಗಳು ಸ್ವತಂತ್ರ ಹೋರಾಟಕ್ಕಾಗಿ "ಘದರ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ೩೭೬ ಮಂದಿ ಭಾರತೀಯ ಪ್ರಯಾಣಿಕರೊಂದಿಗೆ ಕೋಮಗಟ ಮಾರೂ ಎಂಬ ನೌಕೆ, ವಾಂಕೂವರ್‌ರೇವಿನೊಳಗೆ ಬರಲಿರುವಾಗ, ಅದರಲ್ಲಿ ಘದರ್ ಪಕ್ಷದವರಿರುವರೆಂಬ ಅನುಮಾನದಲ್ಲಿ ಅದನ್ನು ಬರಲು ಬಿಡಲಿಲ್ಲ. ಕಲಕತ್ತೆಗೆ ತಿರುಗಿ ಬಂದ ನೌಕೆಯಿಂದ ಇಳಿದ ಪ್ರಯಾಣಿಕರ ಮೇಲೆ ಬ್ರಿಟಿಷ್ ಪೋಲೀಸರು ಗುಂಡು ಹಾರಿಸಿದರು.

ದಕ್ಷಿಣಾಫ್ರಿಕಾದಲ್ಲಿ ಬ್ರಿಟಿಷರ ದುರನ್ಯಾಯಗಳನ್ನು ವ್ಯತಿರೇಕಿಸಿ ಹೋರಾಡಿದ ಗಾಂಧೀಜೀ ೧೯೧೫ ನೇ ಸಂವತ್ಸರದಲ್ಲಿ ಭಾರತ ದೇಶಕ್ಕೆ ತಿರುಗಿ ಬಂದರು. ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯವನ್ನು ಸಿದ್ಧಿಸಿಕೊಳ್ಳಲು ಹೋರಾಡುವ 'ಸತ್ಯಾಗ್ರಹ' ವಿಧಾನವನ್ನು ಗಾಂಧೀಜೀ ಪ್ರವೇಶಗೊಳಿಸಿದರು. ಬಿಹಾರಿನ ಚಂಪಾರಣ್ ರೈತ ಕೂಲಿಗಳನ್ನು ಸಮೈಕ್ಯಪಡಿಸಿ ಅಲ್ಲಿಯ ಬ್ರಿಟಿಷ್ ನೀಲಿವರ್ತಕರ ದುಷ್ಟತನವನ್ನು ವ್ಯತಿರೇಕಿಸಿದರು.





ಸ್ವಾತಂತ್ರ್ಯ ಉದ್ಯಮದ ನಾಯಕರು ಕೆಲವರನ್ನು ಖೈದಿನಲ್ಲಿರಿಸಿದುದಕ್ಕೆ ಶಾಂತಿಯುತವಾಗಿ ಆಕ್ಷೇಪಣೆ ತಿಳಿಸಬೇಕೆಂದು ೧೯೧೯ ನೇ ವರ್ಷ ಏಪ್ರಿಲ್ ೧೩ ರಂದು ಅಮೃತಸರದ ಸಮೀಪವಿದ್ದ ಜಲಿಯನ್‌ವಾಲಾಬಾಗ್‌ನ ಹತ್ತಿರ ಸಾವಿರಾರು ಮಂದಿ ಕೂಡಿದರು. ಅಲ್ಲಿ ಸ್ತ್ರೀಯರೂ ಮಕ್ಕಳೂ ಸಹ ಅನೇಕರು ಸೇರಿದ್ದರು. ಆಗ ಜನರಲ್ ಡಯ್ಯಾರ್ ಎಂಬ ಬ್ರಿಟಿಷ್ ಸೈನ್ಯಾಧಿಕಾರಿಯ ಪರಿಪಾಲನೆಯಲ್ಲಿಅಮೃತಸರ್ ಇದ್ದಿತು.

ಅಲ್ಲಿ ಸೇರಿದವರಿಗೆ ಮೊದಲು ಸಭೆ ನಡೆಸಲು ಯಾವ ಅಭ್ಯಂತರವನ್ನೂ ಹೇಳಲಿಲ್ಲ. ಜನರಲ್ ಡಯ್ಯರ್ ಆಯುಧಪಾಣಿಗಳಾದ ತೊಂಬತ್ತು ಮಂದಿ ಸೈನಿಕರೊಂದಿಗೆ ಥಕ್ಕನೆ ಅಲ್ಲಿಗೆ ಬಂದನು. ಎಂತಹ ಮುನ್ನೆಚ್ಚರಿಕೆಯೂ ಇಲ್ಲದೆ ಗುಂಡುಗಳನ್ನು ಹಾರಿಸಿದನು. ಅದರಿಂದ ೩೭೯ ಮಂದಿ ಸತ್ತರೆಂದೂ ೧೨೦೦ ಮಂದಿ ಗಾಯಗೊಂಡರೆಂದೂ ಅಧಿಕಾರವರ್ಗದ ವಾರ್ತೆಗಳು ತಿಳಿಯಪಡಿಸಿದುವು.





ಜಲಿಯನ್‌ವಾಲಾಬಾಗ್ ಹಿಂಸಾಕಾಂಡ ನಡೆದ ಸ್ಥಳದಲ್ಲಿ ಪ್ರಸ್ತುತ ತ್ಯಾಗಿಗಳ ಸ್ಮಾರಕ ಚಿಹ್ನೆ ಇದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಎಲ್ಲಾ ಮತಗಳ, ಎಲ್ಲಾ ಪ್ರಾಂತಗಳ ಸಾವಿರಾರು ವೀರರ ಮಹಾತ್ಯಾಗಗಳಿಗೆ ನಾವು ತೋರಿಸುವ ಗೌರವ ಮರ್ಯಾದೆಗಳ ಚಿಹ್ನೆಯಾಗಿ ಅದು ಬೆಳಗಿಕೊಂಡಿದೆ.

ತೀವ್ರವಾದಿಗಳಾದ ಸ್ವಾತಂತ್ರ್ಯ ಯೋಧರು ಅನೇಕ ಮಂದಿ ಆ ದಿನಗಳಲ್ಲಿ, ಅನಾರೋಗ್ಯಕರವಾದ ವಾತಾವರಣಕ್ಕೆ ಹೆಸರು ಹೋದ ಅಂಡಮಾನ್ ದ್ವೀಪಗಳಿಗೆ ಕಳುಹಿಸಲ್ಪಟ್ಟರು. ಅಲ್ಲಿ ಅವರು ಅನೇಕ ವ್ಯಾಧಿಗಳಿಗೆ ಗುರಿಯಾಗಿ ಪ್ರಾಣ ಕಳೆದುಕೊಂಡರು.





ಗಾಂಧೀಜೀ ಸ್ವಾತಂತ್ರ್ಯೋದ್ಯಮಕ್ಕೆ ನಾಯಕರಾಗಿ ಬಂದುದರಿಂದ ಹೋರಾಟಕ್ಕೆ ಹೊಸ ತಿರುವು ಬಂದಿತು. ಉಪ್ಪನ್ನು ತಯಾರಿಸುವ ಬಡವರ ಮೇಲೆ ಕೂಡಾ ಬ್ರಿಟಿಷ್ ಪ್ರಭುತ್ವವು ತೆರಿಗೆ ವಿಧಿಸಿತ್ತು. ಗಾಂಧೀಜೀಯ ಆದೇಶದಂತೆ ಪ್ರಜೆಗಳು ಉಪ್ಪಿನ ತೆರಿಗೆಯನ್ನು ವ್ಯತಿರೇಕಿಸಿ ಹಲವು ಕಡೆಗಳಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ' ಖೈದಿಗಳಾಗಿ ನಾನಾ ಹಿಂಸೆಗಳಿಗೆ ಗುರಿಯಾದರು'



# ಯಾರು ಸುಖಿ?

ಒಂದಾನೊಂದು ಕಾಲದಲ್ಲಿ ಮಾಳವ ದೇಶವನ್ನು ಪುಷ್ಕಳನೆಂಬ ರಾಜನು ಬಹುದೊಡ್ಡ ಹೆಸರು ಬರುವ ರೀತಿಯಲ್ಲಿ ಪ್ರಜೆಗಳನ್ನು ಪರಿಪಾಲಿಸಿಕೊಂಡಿದ್ದನು. ಸೊಗಸು ಭೋಗಭಾಗ್ಯಗಳ ಮೇಲೆ ತುಂಬಾ ಇಷ್ಟವಾಗಿದ್ದ ಅವನು ನಿಜಕ್ಕೂ ಮಹಾ ಭೋಗಿಯೇ ಆಗಿದ್ದನು. ಅವನ ಸುತ್ತಲೂ ಸೇರಿಕೊಂಡಿರುವವರೆಲ್ಲಾ ಮುಖಸ್ತುತಿಗಾರರಾಗಿದ್ದರು, "ಮಹಾಪ್ರಭೂ! ನಿಮ್ಮ ಐಶ್ವರ್ಯದ ಮುಂದೆ ಇಂದ್ರನ ಐಶ್ವರ್ಯವೂ ಲೆಕ್ಕಕ್ಕೆ ಬರುವಂತಿಲ್ಲ. ನಿಮ್ಮ ಖಜಾನೆಗೂ ಕುಬೇರನ ಖಜಾನೆಗೂ ಯಾವ ಹೋಲಿಕೆಯೂ ಇಲ್ಲ. ಪ್ರಪಂಚದಲ್ಲಿ ಸುಖಿಯಾದ ಮಹಾರಾಜನಾರೆಂದರೆ ಪುಷ್ಕಳ ಮಹಾರಾಜರನ್ನು ಹೇಳಿದ ಮೇಲೆಯೇ ಇನ್ನೊಬ್ಬರನ್ನು ಹೇಳಬೇಕು. ದೇಶಸಂಚಾರಿಗಳು ಹಾಗೆಯೇ ಹೇಳುತ್ತಾರೆ ಪ್ರಭೂ!" ಎಂದು ಹೊಗಳುತ್ತ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದರು.

ಆ ಬಗೆಯ ಹೊಗಳಿಕೆಗಳನ್ನು ನಂಬಿ "ನನ್ನಂಥ ಭೋಗಿಯೂ, ಸುಖಿಯೂ ಇನ್ನಾರೂ ಇರಲಿಕ್ಕಿಲ್ಲವೆಂದೇ ರಾಜನಿಗೂ ತೋರಿತು. ಹಾಗೆ ಯಾರಾದರೂ ಇರುವರೆಂದು ತಿಳಿದರೆ ಅವರಿಗಿಂತ ತಾನು ಹೆಚ್ಚಿನವನೆನಿಸಿಕೊಳ್ಳಬೇಕೆಂದು ತನ್ನೊಳಗೆ ಹವಣಿಸುವನು. ಅಂತಲೇ ಹೊಗಳಿಸಿಕೊಳ್ಳುವ ಅಭಿಲಾಷೆಯಿಂದ ಹೊಸತಾಗಿ ಯಾರು ಬಂದರೂ ಆ ವಿಷಯ ಪ್ರಶ್ನೆ ಮಾಡದೆ ಬಿಡುತ್ತಿದ್ದಿಲ್ಲ, ಸುಖಭೋಗಗಳೇ ದೊಡ್ಡತನವೆಂದೂ, ಅಂತಹ ದೊಡ್ಡತನದವರು ತನ್ನ ಹೊರತು ಬೇರೆ ಯಾರೂ ಇಲ್ಲವೆಂದೂ, ಇರಕೂಡದೆಂದೂ ಅವನ ಅನಿಸಿಕೆ.

ಒಂದು ದಿನ ಪುಷ್ಕಳ ಮಹಾರಾಜನ ಆಸ್ಥಾನಕ್ಕೆ ಜ್ಞಾನಧನನೆಂಬ ಮಹನೀಯನು ಬಂದನು. ಅವನ ಜ್ಞಾನವನ್ನು ಕುರಿತು ಪುಷ್ಕಳನು ಈ ಮೊದಲೇ ಕೇಳಿದ್ದನು. ಅವನಿಗೆ ಆ ಹೆಸರು ಸಾರ್ಥಕನಾಮವಾಗಿಯೇ ಬಂದಿರುವುದೆಂದು ಎಲ್ಲರೂ ಹೇಳುವರು. ಆದುದರಿಂದ ಪುಷ್ಕಳನು ಅವನನ್ನು ಗೌರವದಿಂದ ಸ್ವಾಗತಿಸಿ, ಆದರೋಪಚಾರ ಮಾಡಿ, "ಸ್ವಾಮೀ! ನಿಮ್ಮ ಬರುವಿಕೆಯಿಂದ ನನ್ನ ರಾಜ್ಯವು ಪಾವನವಾಯಿತು" ಎಂದನು. ಜ್ಞಾನಧನನಿಗೆ ಪಂಚಭಕ್ಷ್ಯಪರಮಾನ್ನಗಳಿಂದ ಆತಿಥ್ಯವಿತ್ತು, ಸುಖಾಸನದಲ್ಲಿ ಕೂಡಿಸಿದನು. ಅವನ ಮುಂದೆ ಗಾಯನ ಕಚೇರಿ

ದಶಕಗಳಾಚೆಗಿನ ಚಂದಮಾಮ ಕಥೆ



ನಡೆಸಿದನು. ಕವಿಗಳಿಂದ ಪದ್ಯಗಳನ್ನು ಹೇಳಿಸಿದನು. ನರ್ತಕಿಯರು ಬಹು ರಮ್ಯವಾಗಿ ನಾಟ್ಯವನ್ನು ಆಡಿ ತೋರಿಸಿದರು. ಅವರಿಗೆಲ್ಲಾ ಬಹುಮಾನಗಳ ವಿತರಣೆಯೂ ನಡೆಯಿತು.

ಜ್ಞಾನಧನನು ಅದನ್ನೆಲ್ಲಾ ನೋಡಿ ಯಾವ ಭಾವವನ್ನೂ ವ್ಯಕ್ತಪಡಿಸದೆ ಸುಮ್ಮನಿದ್ದನು. ಎಲ್ಲರ ಹಾಗೆ ಜ್ಞಾನಧನನೂ ತನ್ನ ವೈಭವವನ್ನು ನೋಡಿ ಪ್ರಶಂಸಿಸುತ್ತಾನೆಂದು ಪುಷ್ಕಳ ರಾಜನು ಅವನನ್ನು ಗಮನಿಸುತ್ತಿದ್ದನು. ಜ್ಞಾನಧನನು ತುಟಿ ಕವಲಿಸದೆ, ಕಣ್ಣು ಅರಳಿಸದೆ ಜಡನಂತಿರುವುದನ್ನು ನೋಡಿ, ಇವನೆಂತಹ ಅರಸಿಕನೋ ಅನಿಸಿ ರಾಜನ ಉತ್ಸಾಹ ತಗ್ಗಿತು. ಕಡೆಗೆ ಸುಮ್ಮನಿರಲು ಮನಸ್ಸು ಬಾರದೆ, "ಮಹಾನುಭಾವರೇ, ತಾವು ಅನೇಕ ದೇಶಗಳನ್ನು ಸುತ್ತಿದವರು. ಅನೇಕ ರಾಜರನ್ನು ಕಂಡವರು. ನನಗಿಂತ ಹೆಚ್ಚಿನ ಸುಖಭೋಗಗಳ ರಾಜನು ಯಾರಾದರೂ ಇದ್ದಾರೆಯೆ?" ಎಂದು ಕೇಳಿದನು.

ಅದಕ್ಕೆ ಜ್ಞಾನಧನನು "ರಾಜ ಮಹಾರಾಜರ ವರೆಗೆ ಹೋಗುವ ಅಗತ್ಯವೇ ಇಲ್ಲ. ನನ್ನ ಊರಿನಲ್ಲಿಯೇ ಪ್ರತಾಪನೆಂಬೊಬ್ಬನಿದ್ದನು. ಅವನೇ ಎಲ್ಲರಿಗಿಂತಲೂ ಹೆಚ್ಚು ಸುಖಿ ಎಂದು ಹೇಳಬಹುದು" ಎಂದನು.

"ಪ್ರತಾಪನೋ? ಯಾರವನು? ಅವನ ಹೆಸರನ್ನೇ ನಾನು ಕೇಳಿಲ್ಲವಲ್ಲಾ! ಅಂತಹ ಸಾಮಾನ್ಯನೊಬ್ಬನು ನನಗಿಂತ ಹೆಚ್ಚಿನ ಸುಖಿ ಎಂದರೆ ಆಶ್ಚರ್ಯವಾಗಿದೆ! ನಂಬಲಿಕ್ಕೇ ಆಗುವುದಿಲ್ಲ" ಎಂದನು ರಾಜ.

"ರಾಜಾ, ಪ್ರತಾಪನು ರಾಜನೇನಲ್ಲ, ನಿನ್ನ ಹಾಗೆ ಸುಖಭೋಗಗಳ ಜಾಡ್ಯದವನೂ ಅಲ್ಲ. ಆದರೆ ಸುಖವಾಗಿದ್ದನೆಂಬುದು ನಿಜ. ಕಷ್ಟಪಟ್ಟು ಸಂಪಾದಿಸಿದನು, ಹೊಟ್ಟೆ ತುಂಬಾ ತಿನ್ನುತ್ತಿದ್ದನು. ಇತರರಿಗೂ ಕೊಡುತ್ತಿದ್ದನು. ಗಂಡು ಹೆಣ್ಣು ಮಕ್ಕಳನ್ನೂ ಪಡೆದನು. ಮಕ್ಕಳನ್ನು ಯಾವ ಕೊರತೆಯೂ ಇಲ್ಲದಂತೆ ಸರಿಯಾಗಿ ಬೆಳೆಸಿದನು. ಹೆಣ್ಣು ಮಕ್ಕಳಿಗೆ ಮದುವೆ ಮಾಡಿದನು. ಸೊಸೆಯಂದಿರನ್ನು ಮನೆಗೆ ತಂದನು. ಮೊಮ್ಮಕ್ಕಳನ್ನು ಎತ್ತಿಕೊಂಡನು. ಅರುವತ್ತು ವರ್ಷಗಳಿಗಿಂತ ಹೆಚ್ಚಿಗೇ ಬದುಕಿದನು. ಕಡೆಗೆ ಮಾತ್ರ ದೇಶಕ್ಕಾಗಿ ಸೈನ್ಯದಲ್ಲಿ ಸೇರಿ ಯುದ್ಧಮಾಡಿ ವೀರಮರಣ ಹೊಂದಿದನು" ಎಂದನು ಜ್ಞಾನಧನ.

"ಹೋಗಲಿ, ಆ ಪ್ರತಾಪನ ಅನಂತರ ನಾನು ಲೆಕ್ಕಕ್ಕೆ ಬರುತ್ತೇನೆಯೇ?" ಎಂದು ರಾಜನು ಕೇಳಿದನು.

"ಇಲ್ಲ ರಾಜಾ ಇಲ್ಲ. ಆ ಪ್ರತಾಪನ ಅನಂತರ ಬರುವವರು ಇಬ್ಬರು ಅಣ್ಣತಮ್ಮಂದಿರು ಕೂಡಾ ನಮ್ಮ ಊರಿನಲ್ಲೇ ಇದ್ದಾರೆ. ಒಳ್ಳೇ ದೇಹದಾರ್ಢ್ಯ ಉಳ್ಳವರು. ನಿರ್ಮಲ ಹೃದಯದವರು. ಪರೋಪಕಾರ ಪಾರಾಯಣರು. ಬಹಳ ಸಂತೋಷದಲ್ಲಿರುವಾಗಲೇ ಪ್ರಾಣ ಬಿಟ್ಟರು" ಎಂದನು ಜ್ಞಾನಧನ.



ಪುಷ್ಕಳನಿಗೆ ಕೋಪ ಬಂದಿತು. "ನೀವು ದೊಡ್ಡವರೆಂದುಕೊಂಡು ಗೌರವದಿಂದ ಪ್ರಶ್ನೆ ಕೇಳಿದರೆ ಏನೇನೋ ಅರ್ಥವಿಲ್ಲದ್ದು ಹೇಳುವಿರಾ? ನೀವು ಹೇಳುವ ಆ ಸಾಮಾನ್ಯ ಜನರಿಗೂ ನನ್ನ ಸುಖಭೋಗ ವೈಭವಗಳಿಗೂ ಎಲ್ಲಿಯ ಸಾಮ್ಯ?" ಎಂದನು ರಾಜ.

"ಕೋಪಿಸಬೇಡ ರಾಜಾ, ನೀನು ಅನುಭವಿಸುವುದಕ್ಕೂ, ನನ್ನ ಮುಂದೆ ಪ್ರದರ್ಶಿಸುವವುಗಳಿಗೂ ಸುಖಭೋಗಗಳೆಂಬ ಹೆಸರಲ್ಲ. ಎಲ್ಲರೂ ಹಾಗೆ ಅಂದುಕೊಳ್ಳುವುದರಿಂದ ನೀನೂ ಅಂದುಕೊಂಡಿರುವಿ. ಇದೆಲ್ಲಾ ಅಶಾಶ್ವತವಾದುವು. ಯಾವುದು ಅಮರತ್ವದ ಬದುಕೋ ಅದು ಸುಖಜೀವನ, ಅವನೇ ಸುಖಿ" ಎಂದು ಹೇಳಿ ಜ್ಞಾನಧನನು ತನ್ನ ದಾರಿ ಹಿಡಿದು ಹೊರಟು ಹೋದನು.

"ಅವನು ಹೋದರೆ ಹೋಗಲಿ ಪ್ರಭೂ. ಅವನ ಗಡ್ಡ ಮೀಸೆಗಳನ್ನು ನೋಡಿ ಏನೋ ನಂಬಿ ಆತನಿಗೆ ಮರ್ಯಾದೆ ಮಾಡಿದಿರಿ, ಎತ್ತಿಗೇನು ಗೊತ್ತು ಅವಲಕ್ಕಿಯ ರುಚಿ? ಎಂಬ ಹಾಗೆ ತಮ್ಮ ವೈಭವವನ್ನೂ ಸುಖವನ್ನೂ ಕಣ್ಣುಬಿಡಿಸಿ ನೋಡಿದರೂ ಮೆದ್ದರೂ ಎಲ್ಲಾ ಒಂದೇ ಅನಿಸುತ್ತದೆ ಮಹಾ ಜ್ಞಾನಧನನಿಗೆ. ಸುಖದುಃಖಗಳ ತಾರತಮ್ಯ ಅರಿತ ನಮ್ಮಂಥವರೇ ಅದನ್ನು ಹೇಳಬೇಕು. ಯಾರಿಗೆ ಹೆಚ್ಚಿನ ಸುಖಭೋಗಗಳೆಂದು ಕೇಳಿದರೆ ನಿಃಸಂಶಯವಾಗಿಯೂ ನೀವೇ ಮಹಾಸ್ವಾಮಿ!" ಎಂದು ಸಭೆಯಲ್ಲಿದ್ದವನೊಬ್ಬನು ಹೇಳಿದನು. ಕೂಡಲೇ ಎಲ್ಲರೂ "ಪುಷ್ಕಳ ಮಹಾರಾಜರಿಗೆ ಜೈ!" ಎಂದು ಘೋಷ ಮಾಡಿದರು.

ಸ್ತುತಿಪ್ರಿಯನಾದ ಪುಷ್ಕಳ ರಾಜನು ಅದರಿಂದ ಸಂತೋಷಪಟ್ಟು, ಜ್ಞಾನಧನನು ಹೇಳಿದುದನ್ನೆಲ್ಲ ಒಂದು ಸ್ವಪ್ನವೆಂದು ಭಾವಿಸಿ ಅದನ್ನು ಮರೆತು ಎಂದಿನಂತಿದ್ದನು.

ಒಂದು ವರ್ಷದ ಮೇಲೆ ಒಂದು ದಿನ ಪುಷ್ಕಳ ರಾಜನು ಅಂತಃಪುರದಲ್ಲಿ ಗಾಢ ನಿದ್ರೆಯಲ್ಲಿದ್ದನು. "ಶತ್ರುಗಳು! ಶತ್ರುಗಳು!" ಎಂಬ ಕೂಗು ಒಮ್ಮೆಗೇ ನಾಲ್ಕು ಸುತ್ತಲೂ ಕೇಳತೊಡಗಿತು. ಗಡಬಡಿಸಿ ಎದ್ದು ಅತ್ತಿತ್ತ ನೋಡುವ ರಾಜನ ಬಳಿಗೆ ರಾಜಭಟರು ಓಡಿಬಂದು, "ಸಾಮಂತರಾಜ ಮಹಾಬಲನು ಸೇನೆಯೊಂದಿಗೆ ಥಕ್ಕನೆ ಬಂದು ಕೋಟೆಯನ್ನು ಮುತ್ತಿದ್ದಾನೆ. ನಮ್ಮವರು ತಡೆಯುತ್ತಿದ್ದರೂ ಲಾಭವೇನಿಲ್ಲ" ಎಂದರು.

ಮರುಕ್ಷಣದಲ್ಲಿ "ಮಹಾಬಲ ರಾಜನಿಗೆ ಜೈ" ಎಂದು ಶತ್ರುಗಳು ಕೋಟೆಯೊಳಗೆ ನುಗ್ಗಿ ಬರುವುದನ್ನು ಪುಷ್ಕಳನೇ ನೋಡಿದನು.

ಇನ್ನು ಕ್ಷಣಕಾಲ ಉಪೇಕ್ಷೆ ಮಾಡಿದರೂ ಪ್ರಾಣ ಉಳಿಯಲಾರದೆಂದು ಪುಷ್ಕಳನು ತನ್ನ ರಾಜಭೂಷಣಗಳನ್ನು ಕಳಚಿ ಸಾಮಾನ್ಯ ದುಸ್ತು ಹಾಕಿಕೊಂಡು ಜೀವ ಉಳಿಸಿಕೊಳ್ಳಲು ಪ್ರಯತ್ನಿಸಿದನು.

"ಯಾವನೋ ಓಡಿಹೋಗುತ್ತಿದ್ದಾನೆ. ಹಿಡಿದು ಕೊಳ್ಳಿ!" ಎಂದನು ಶತ್ರುಗಳ ಸೇನಾನಿ. ಅವನು ಪುಷ್ಕಳನೆಂಬ ಸಂಗತಿ ತಿಳಿಯದೆ ಶತ್ರು ಸೈನಿಕ ನೊಬ್ಬನು ಕಡಿದುಹಾಕಲು ಕತ್ತಿ ಎತ್ತಿದನು. ಆಗ ಪುಷ್ಕಳನ ಹಿಂದೆಯೇ ಅವನ ಎರಡನೆಯ ಕುಮಾರ ನಿದ್ದನು. ಅವನು ಬಾಯಿಬಾರದ ಮೂಕನಾದರೂ ಈ ಗಾಬರಿಯ ಕ್ಷಣಗಳಲ್ಲಿ ಅವನ ನಾಲಗೆ ಮಗುಚಿ, "ಅಯ್ಯೋ! ಇವರು ನನ್ನಪ್ಪ, ಪುಷ್ಕಳ ಮಹಾ ರಾಜರು! ಕೊಲ್ಲಬೇಡಿ!" ಎಂದು ಕೂಗಿದನು. ಕೊಲ್ಲಲು ಕತ್ತಿ ಎತ್ತಿದ ಭಟನು ನಿಂತು, ಪುಷ್ಕಳ ನನ್ನು ಬಂಧಿಸಿ ಒಯ್ದು ಮಹಾಬಲನ ಮುಂದೆ ನಿಲ್ಲಿಸಿದನು.

ಶತ್ರುಶೇಷವನ್ನು ಉಳಿಸಬಾರದೆಂದುಕೊಂಡು ಮಹಾಬಲನು "ಈ ಮಹಾ ಸುಖಿಯೆಂಬ ಭ್ರಮೆ ಹಿಡಿದವನನ್ನು ಬೆಂಕಿಯ ಕುಂಡದಲ್ಲಿ ಹಾಕಿರಿ" ಎಂದು ಆಜ್ಞೆ ಮಾಡಿದನು.

ಪುಷ್ಕಳನ ಸುತ್ತಲೂ ಒಣಗಿದ ಕಟ್ಟಿಗೆಗಳನ್ನು ಪೇರಿಸಿದರು. ನೋಡಲು ಎಲ್ಲರೂ ಬಂದರು. ಅವನನ್ನು ಹೊಗಳಿಕೊಂಡಿದ್ದವರು ಕೂಡಾ ಅನೇಕ ಮಂದಿ ಅಲ್ಲಿದ್ದರು.

ಪುಷ್ಕಳನು ಒಂದು ಸಾರಿ ಸುತ್ತಲೂ ನೋಡಿದನು. ತನ್ನ ಕೋಟೆ, ಭವನ ಎಲ್ಲವನ್ನೂ ನೋಡಿದನು. ಈಗ ಅವಾವುವೂ ತನ್ನವಲ್ಲ. ಎಷ್ಟು ಬೇಗ ಎಂತಹ ಮಾರ್ಪಾಡು! ಈಗ ತನಗೆ ಎಂತಹ ದಾರುಣವಾದ ಮರಣ ಬರಲಿದೆ! "ಅಯ್ಯೋ! ಜ್ಞಾನಧನನು ಹೇಳಿದ್ದು ಅಕ್ಷರಶಃ ನಿಜವಾಯಿತು! ನನ್ನದು ತೀರಾ ಅಶಾಶ್ವತ ಬದುಕು. ಸುಖವಾದ ಬದುಕು ಅಲ್ಲವೇ ಅಲ್ಲ. ಓ! ಜ್ಞಾನಧನಾ! ನಿನ್ನ ಮಾತು ಬಂಗಾರ ದಂಥವು!" ಎಂದು ಕೂಗಿಕೊಂಡನು ಪುಷ್ಕಳ ರಾಜ.

ಅದನ್ನು ಕೇಳಿ ಮಹಾಬಲನು, "ಯಾರು ಆ ಜ್ಞಾನಧನ? ನಿನಗೇನು ಹೇಳಿದ?" ಎಂದು ಕೇಳಿದನು.

ಆಗ ಅಲ್ಲಿದ್ದವರು ನಡೆದ ಸಂಗತಿಯನ್ನೆಲ್ಲ ಬಿಡಿಸಿ ಹೇಳಿದರು.

ಮಹಾಬಲನು ಆಲೋಚನೆಗೆ ಬಿದ್ದು, "ನಿಜವೇ! ಯಾರಿಗೂ ಯಾವ ಸ್ಥಿತಿಯೂ ಶಾಶ್ವತವಲ್ಲ. ಈ ಕ್ಷಣದಲ್ಲಿ ದೊಡ್ಡ ಜಯ ಸಂಪಾದಿಸಿದ ತನಗೆ ಮುಂದೆ ಏನು ಕಾದಿದೆಯೋ! ಪುಷ್ಕಳನನ್ನು ಕೊಲ್ಲಲು ನಾನು ಯಮನಾಗುವುದು ಬೇಡ!" ಎಂದು ಪಶ್ಚಾತ್ತಾಪಪಟ್ಟನು.

ಮಹಾಬಲನು ಪುಷ್ಕಳನಿಗೇ ಆ ರಾಜ್ಯವನ್ನು ಬಿಟ್ಟುಕೊಟ್ಟು, ತಾನು ಅವನ ಸಾಮಂತತನವನ್ನು ಮಾತ್ರ ಕಳಚಿಕೊಂಡು ಸ್ವತಂತ್ರ ರಾಜನಾದನು! ಈಗ ಪುಷ್ಕಳನಿಗೆ ಹೊಗಳಿಕೆಯ ಅಮಲು ಇಲ್ಲ.





# ನ್ಯಾಯವಾದ ಹಣ

ಒಂದು ಊರಿನಲ್ಲಿ ಪಾಪಣ್ಣನೆಂಬೊಬ್ಬ ಯುವಕನಿದ್ದನು. ಅವನಿಗೆ ಅಷ್ಟೇನೂ ಓದು ಬರೆಹ ತಿಳಿದಿರಲಿಲ್ಲ. ಆದರೆ ಅವನ ಮಾತೂ, ಕೆಲಸಗಳೂ ಒಳ್ಳೆಯವಾಗಿದ್ದುವು. ಉದಾಸೀನವಿಲ್ಲದೆ ಕೆಲಸ ಮಾಡುವನು. ಆದುದರಿಂದ ಊರಿನವರು ಅವನನ್ನು ಕರೆದು ಕರೆದು ಕೆಲಸ ಮಾಡಿಸಿಕೊಳ್ಳುತ್ತಿದ್ದರು. ಪಾಪಣ್ಣ ದಾಕ್ಷಿಣ್ಯದ ಸ್ವಭಾವದವನಾದುದರಿಂದ, ತಾನು ಮಾಡಿದ ಕೆಲಸಕ್ಕೆ ಎಷ್ಟು ಕೊಡುತ್ತಾರೋ ಅಷ್ಟಕ್ಕೇ ಬಾಯಿಮುಚ್ಚಿ ಸುಮ್ಮನಾಗುವನು. ಮನಸ್ಸಿನಲ್ಲಿ ಕೂಡಾ ಅವರ ಮೇಲೆ ಕೋಪವಿಟ್ಟುಕೊಳ್ಳುವುದಿಲ್ಲ. ಮತ್ತೆ ಕೆಲಸಕ್ಕೆ ಕರೆದರೂ ಹೋಗಿ ಸರಿಯಾಗಿಯೇ ಮಾಡುವನು. ಈ ಕಾರಣದಿಂದಾಗಿ ಪಾಪಣ್ಣನಿಗೆ ಕಟುಂಬ ಖರ್ಚಿಗಾಗಿ ಹಣದ ಅಗತ್ಯ ಬಿದ್ದಾಗಲ್ಲೆಲ್ಲ ಕೈ ಖಾಲಿಯಾಗಿಯೇ ಇದ್ದು ಬಹಳ ಕಷ್ಟಪಡುವನು.

ಆ ಊರಿನಲ್ಲಿ ಲಕ್ಷ್ಮಿ ಎಂಬ ಹುಡುಗಿಯೊಬ್ಬಳಿದ್ದಳು. ಅವಳ ಮೇಲೆ ಪಾಪಣ್ಣನಿಗೆ ಪ್ರತ್ಯೇಕವಾದೊಂದು ಅಭಿಮಾನವುಂಟಾಯಿತು. ಲಕ್ಷ್ಮಿಗೂ ಅವನ ಮೇಲೆ ಇಷ್ಟವಾಗಿತ್ತು. ಇವರಿಬ್ಬರ ಹೊಲಬು ಲಕ್ಷ್ಮಿಯ ತಂದೆಗೆ ಗೊತ್ತಾಗಿಬಿಟ್ಟಿತು. ಅವನು ಪಾಪಣ್ಣನನ್ನು ಕರೆದು, " ಎಲೋ ಪಾಪಣ್ಣಾ, ನೀನು ಬಾಯಿ ಇದ್ದೂ ಮೂಕನಂಥವನು. ನಿನಗೆ ನನ್ನ ಮಗಳ ಮೇಲೆ ಇಷ್ಟವಿರುವ ಸಂಗತಿ ನನಗೆ ಗೊತ್ತಾಯಿತು. ಆದರೆ ಹೆಂಡತಿಯನ್ನು ಪೋಷಿಸಲು ನಿನ್ನಿಂದೇನಾದೀತು ? ನಿನಗೆ ಕಡೇಪಕ್ಷ ಎರಡು ಎಕರೆಯಷ್ಟಾದರೂ ಹೊಲ ಗದ್ದೆಗಳಿದ್ದರೆ ಹೊರತು ನನ್ನ ಮಗಳನ್ನು ಕೊಡಲಾರೆ " ಎಂದು ಹೇಳಿದನು.

ಈ ಮಾತುಗಳು ಪಾಪಣ್ಣನನ್ನು ಬಹಳವಾಗಿ ಕಂಗೆಡಿಸಿತು. ಆಗ ಲಕ್ಷ್ಮಿ ಅವನನ್ನು ಸೈಗೆಯಿಂದ ಕರೆದು ಮರೆಯಲ್ಲಿ ರಹಸ್ಯವಾಗಿ, " ಅಪ್ಪನ ಮಾತು ಕೇಳಿ ಅಷ್ಟೇನೂ ಚಿಂತೆಪಡಬೇಕಾಗಿಲ್ಲ. ನಿನ್ನ ಮೇಲೆ ಅಪ್ಪನಿಗೆ ಇಷ್ಟವೇ ಇದೆ. ನನ್ನ ಅಪ್ಪನಿಗೆ ಒಂದು ಹೊಸ ಜರೀ ಶಾಲು ತಂದುಕೊಡು, ನೀನು ಅಷ್ಟೊಂದು ಮಾಡಿದರೇ ಸಾಕು. ನಮ್ಮ ಮದುವೆಗೆ ಒಪ್ಪಿಕೊಳ್ಳುತ್ತಾರೆ " ಎಂದಳು.

ಪಾಪಣ್ಣ ಸಂತೋಷಪಟ್ಟು, ಕೂಡಲೇ ಆ ಊರಿನ ದೊಡ್ಡ ಸಾಹುಕಾರನ ಬಳಿಗೆ ಹೋಗಿ, ತನಗೆ ಒಂದು ಜರೀ ಶಾಲು ಬೇಕೆಂದು ಕೇಳಿದನು.



ತುಂಬಾ ನಿರುತ್ಸಾಹ ಪಟ್ಟನು. ಆ ದಿನದಿಂದ ಹೆಚ್ಚೆಚ್ಚು ಕಷ್ಟಪಡುತ್ತ, ಹೊಟ್ಟೆ ಬಾಯಿಕಟ್ಟಿ ಹದಿನೈದು ದಿನಗಳಲ್ಲಿ ಮನೆ ಖರ್ಚು ಹೋಗಲಾಗಿ ನಾಲ್ಕು ಬೆಳ್ಳೀ ನಾಣ್ಯಗಳನ್ನು ಸೇರಿಸಿಕೊಂಡನು.

ತರುವಾಯ ಅವನು ಆ ಹಣವನ್ನು ತೆಗೆದು ಕೊಂಡು ಸಾಹುಕಾರನ ಮನೆಗೆ ಹೋಗಿ, ಹಣ ಕೊಟ್ಟು ಒಂದು ಜರೀ ಶಾಲುವೆ ತೆಗೆದುಕೊಂಡನು. ಆಮೇಲೆ ಶಾಲುವೆಯೊಂದಿಗೆ ಲಕ್ಷ್ಮಿಯ ಮನೆಗೆ ಹೋದನು. ಲಕ್ಷ್ಮಿಯ ತಂದೆ ಅವನನ್ನು ನೋಡಿ ಸಂತೋಷದಿಂದ, "ಅಬ್ಬ! ಬಹಳ ಕಾಲದಿಂದ ನನಗಿದ್ದ ಆಶೆಯನ್ನು ತೀರಿಸಿಬಿಟ್ಟೆ! ಬಹಳ ತೃಪ್ತಿಯಾಯಿತಪ್ಪ. ನಿನಗೂ ಏನಾದರೂ ಕೋರಿಕೆ ಇದ್ದೀತು. ಕೇಳು, ತೀರಿಸುತ್ತೇನೆ" ಎಂದನು.

"ನನ್ನ ಕೋರಿಕೆ ಮೊದಲೇ ಹೇಳಿದ್ದೇನೆ. ಲಕ್ಷ್ಮಿಯನ್ನು ನನಗೆ ಕೊಟ್ಟು ಮದುವೆ ಮಾಡಿಸಿರಿ. ಅದಕ್ಕಾಗಿ ತಾನೇ ನಾನು ಹೆಣಗಿಕೊಂಡಿದ್ದೇನೆ?" ಎಂದನು ಪಾಪಣ್ಣ.

"ಹೌದೌದು, ನಿನ್ನ ಮನಸ್ಸು ಒಳ್ಳೆಯದೆಂದು ನನಗೆ ಗೊತ್ತು. ನನ್ನನ್ನು ಇಷ್ಟು ಸಂತೋಷಪಡಿಸಿದ ನಿನಗೆ ದೇವರು ಒಳ್ಳೆದು ಮಾಡದಿರಲಾರ. ನಿನ್ನನ್ನು ಮದುವೆಯಾದರೆ ನನ್ನ ಮಗಳು ಸುಖಪಡುತ್ತಾಳೆ. ಅವಳಿಗೂ ಇಷ್ಟವಿದೆ. ಹಾಗೆಯೇ ಮಾಡುತ್ತೇನೆ" ಎಂದನು ಲಕ್ಷ್ಮಿಯ ತಂದೆ.

ಪಾಪಣ್ಣನಿಗೆ ಸಂತೋಷವಾಯಿತು. ಅಷ್ಟರೊಳಗೆ ವಿಚಿತ್ರವಾದೊಂದು ಸಂಗತಿ ಹೊರಟಿತು.

ಪಾಪಣ್ಣನಿಗೆ ಜರೀಶಾಲನ್ನು ಮಾರಿದ ಸಾಹುಕಾರನ ಮಗನಿಗೆ ಕೆಲವು ದಿನಗಳಿಂದ ಆರೋಗ್ಯ ಕೆಡಲು ತೊಡಗಿತ್ತು. ಅದೇನು ರೋಗವೆಂದು ಯಾರಿಗೂ ಗೊತ್ತಾಗಲಿಲ್ಲ. ವೈದ್ಯರಿಂದೇನೂ ಪ್ರಯೋಜನವಿಲ್ಲವೆಂದು ನಿರ್ಧಾರವಾದ ಮೇಲೆ, ಸಾಹುಕಾರನು ಒಬ್ಬ ಸಾಧುವಿನ ಬಳಿಗೆ ಹೋದನು.

"ಅದಕ್ಕೇನು? ಒಳ್ಳೆಯ ಜರೀ ಶಾಲೇ ಕೊಡುತ್ತೇನೆ. ನಿನಗೆ ಸ್ವಲ್ಪ ಕಡಿಮೆ ಬೆಲೆಗೇ ಕೊಡುತ್ತೇನೆ. ನಾಲ್ಕು ಬೆಳ್ಳೀ ನಾಣ್ಯ ತೆಗೆದುಕೊಂಡು ಬಾ" ಎಂದನು ಸಾಹುಕಾರ ನಿರ್ದಾಕ್ಷಿಣ್ಯದಿಂದ.

ಪಾಪಣ್ಣನು ಎಷ್ಟೋ ಸಾರಿ ಸಾಹುಕಾರನಿಗೆ ಕೆಲಸಗಳನ್ನು ಮಾಡಿದ್ದನು. ಅದಕ್ಕೆಲ್ಲ ಸಾಹುಕಾರನು ಸರಿಯಾಗಿ ಹಣ ಕೊಟ್ಟಿರಲಿಲ್ಲ. ಆದರೆ ಪಾಪಣ್ಣನೊಂದು ಜರೀಶಾಲು ಕೇಳಿದ್ದಕ್ಕೆ ಹಣ ತರಲು ಹೇಳುತ್ತಾನೆ!

ಪಾಪಣ್ಣನು ಅಲ್ಲಿಂದ ಯಾವ ಮಾತೂ ಹೇಳದೆ ಹಿಂದಿರುಗಿದ್ದನು. ಊರೊಳಗೆ ಒಬ್ಬೊಬ್ಬರ ಹತ್ತಿರವೂ ತನಗೆ ನಾಲ್ಕು ಬೆಳ್ಳೀ ನಾಣ್ಯ ಬೇಕೆಂದು ಕೇಳಿ ನೋಡಿದನು. ಒಬ್ಬರಾದರೂ ಉದಾರ ಬುದ್ಧಿ ತೋರಿಸಲಿಲ್ಲ. ಅವರಿಗೆಲ್ಲಾ ಪಾಪಣ್ಣ ಪುಕ್ಕಟೆ ಕೆಲಸ ಮಾಡಿಕೊಟ್ಟವನೇ. ಈಗ ಅವರೆಲ್ಲ ನಿರ್ದಾಕ್ಷಿಣ್ಯದವರಾಗಿರುವುದನ್ನು ನೋಡಿ, ಅವನು

ಸಾಧು ಮನೆಗೆ ಬಂದು ರೋಗಿಯಾದ ಹುಡುಗನನ್ನು ನೋಡಿ, ಸಾಹುಕಾರನೊಂದಿಗೆ, "ನೀನು ಮಾಡಿದ ಪಾಪಗಳು ವ್ಯಾಧಿಯ ರೂಪದಲ್ಲಿ ನಿನ್ನ ಮಗನನ್ನು ಬಾಧಿಸುತ್ತಿದೆ. ಇದಕ್ಕೆ ನಾನು ಔಷಧ ಕೊಡುತ್ತೇನೆ. ಅದಕ್ಕಾಗಿ ನೀನು ಹಣ ಕೊಡಬೇಕು" ಎಂದನು.

ಹಣ ಕೊಡುವುದಾಗಿ ಸಾಹುಕಾರನು ಒಪ್ಪಿದ ಕೂಡಲೇ ಸಾಧು ಅವನ ಮಗನಿಗೆ ಏನೋ ಔಷಧ ಕೊಟ್ಟನು. ಕೂಡಲೇ ಅದರ ಹಣವನ್ನು ಪಡೆದುಕೊಂಡನು. ಆಮೇಲೆ ಒಂದು ವಾರ ಕಳೆದರೂ ಸಾಹುಕಾರನ ಮಗನ ರೋಗವು ಸ್ವಲ್ಪವೂ ವಾಸಿಯಾದುದು ಕಾಣಲಿಲ್ಲ, ಅದನ್ನು ತಿಳಿದು ಸಾಧುವಿಗೆ ಬಹಳ ಆಶ್ಚರ್ಯವಾಯಿತು. ಸಾಹುಕಾರನು ತನ್ನ ಮಗನ ಪರಿಸ್ಥಿತಿಯನ್ನು ನೋಡಿ ತುಂಬ ಹೆದರತೊಡಗಿದನು.

"ಕಾರಣ ತಿಳಿಯಿತು. ನೀನು ನನಗೆ ಕೊಟ್ಟ ಔಷಧದ ಹಣ ನ್ಯಾಯವಾಗಿ ಸಂಪಾದಿಸಿದ್ದು ಅಲ್ಲ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಆದುದರಿಂದಲೇ ನನ್ನ ಔಷಧ ಫಲಿಸದೆ ಹೋಗಿದೆ" ಎಂದನು ಸಾಧು.

"ಇನ್ನೇನು ಮಾಡಬೇಕು ಸ್ವಾಮಿ?" ಎಂದು ದಿಗಿಲಿನಿಂದ ಕೇಳಿದನು ಸಾಹುಕಾರ.

"ನನ್ನ ಔಷಧವು ನ್ಯಾಯವಾದ ಸಂಪಾದನೆಯ ಹಣಕ್ಕೇ ಫಲಿಸುವಂತಹುದು. ನಾನು ಹೇಳಿದಂತೆ ಮಾಡಿದರೆ ನಿಜವು ನಿರೂಪಣವಾಗಿಬಿಡುತ್ತದೆ. ನೀನು ಸಾಹುಕಾರನಾದುದರಿಂದ ದಿನಾ ನಡೆಯುವ ವ್ಯವಹಾರದಲ್ಲಿ ಎಷ್ಟೋ ಜನರು ನಿನಗೆ ಹಣ ತಂದುಕೊಡುತ್ತಾ ಇರುತ್ತಾರೆ. ಹಾಗೆ ಬಂದವರ ಹೆಸರು ಗುರುತಿಟ್ಟುಕೊಂಡು ಬಂದ ಹಣವನ್ನು ನನಗೆ ಕೊಡುತ್ತಾ ಇರು. ನ್ಯಾಯವಾದ ಸಂಪಾದನೆ ನನ್ನ ಕೈಗೆ ಬಿದ್ದ ಕೂಡಲೇ ನಿನ್ನ ಮಗನ ರೋಗ ಗುಣವಾಗಿಬಿಡುತ್ತೆ. ಆ ಹಣವನ್ನಿಟ್ಟುಕೊಂಡು ಉಳಿದುದೆಲ್ಲ ವಾಪಾಸು ಕೊಡುತ್ತೇನೆ" ಎಂದನು ಸಾಧು.

ಸಾಹುಕಾರನು ಹಾಗೆಯೇ ಮಾಡತೊಡಗಿದನು. ಈ ಸಂದರ್ಭದಲ್ಲಿಯೇ ಪಾಪಣ್ಣನು ಅವನಿಗೆ ಹಣ





ಕೊಟ್ಟು ಶಾಲು ಕೊಂಡುಕೊಂಡದ್ದು. ಆ ಹಣವನ್ನು ಸಾಹುಕಾರನು ಸಾಧುವಿನ ಕೈಗೆ ಹಾಕಿದನು. ಮರುನಿಮಿಷದಲ್ಲಿ ಅದುವರೆಗೂ ಮಯಕದಲ್ಲಿದ್ದ ಅವನ ಮಗನು ತಟಕ್ಕನೆದ್ದು ಕುಳಿತು, ತಂದೆಯನ್ನು ಕರೆದು ಉತ್ಸಾಹದಿಂದ ಮಾತಾಡತೊಡಗಿದನು.

"ಇದೇ ನ್ಯಾಯವಾದ ಹಣ! ಇದನ್ನು ಯಾರ ಕೈಯಿಂದ ತೆಗೆದುಕೊಂಡೆಯೋ ಅವರಿಗೆ ಹಿಂದಿರುಗಿಸಿ ಕೊಟ್ಟುಬಿಡು. ಬೇರೆ ರೋಗಿಗಳಿಗೆ ಉಪಯೋಗವಾಗಬಹುದು" ಎಂದನು ಸಾಧು.

ಸಾಧು ಕೊಟ್ಟ ಆ ಹಣವನ್ನು ಸಾಹುಕಾರನು ಪಾಪಣ್ಣನ ಮನೆಗೆ ಕಳುಹಿಸಿಕೊಟ್ಟನು. ಆ ಸಮಯದಲ್ಲಿ ಸಾಹುಕಾರನ ಮನೆಗೆ ಗ್ರಾಮದ ಪಟೇಲನು ಬಂದನು. ಪಟೇಲನ ಮಗನಿಗೂ ಏನೋ ರೋಗವಂತೆ. ಸಾಹುಕಾರನು ಒಬ್ಬ ಸಾಧುವಿನಿಂದ ತನ್ನ ಮಗನಿಗೆ ಚಿಕಿತ್ಸೆ ಮಾಡಿಸುವನೆಂದು ತಿಳಿದು ವಿಚಾರಿಸಲು ಬಂದಿದ್ದನು. ಸಾಹುಕಾರನ ಮಗನ ರೋಗ ಪೂರ್ತಿ ಗುಣವಾದುದನ್ನು ನೋಡಿ, ಪಟೇಲನು ಸಾಧುವನ್ನು ತನ್ನ ಮನೆಗೂ ಬರಬೇಕೆಂದು ಕೇಳಿಕೊಂಡನು.

ಪಟೇಲನ ಮಗನನ್ನು ಪರೀಕ್ಷಿಸಿ ನೋಡಿದ ಮೇಲೆ ಆ ಸಾಧು, "ನೀನು ಮಾಡಿದ ಪಾಪಗಳೇ ರೋಗದ ರೂಪದಲ್ಲಿ ನಿನ್ನ ಮಗನನ್ನು ಬಾಧಿಸುತ್ತಿದೆ. ನಿನ್ನ ಮನೆಯಲ್ಲಿ ನ್ಯಾಯವಾದ ಹಣವಿದ್ದರೆ ನಾನು ಕೊಡುವ ಔಷಧದಿಂದ ಗುಣವಾಗುತ್ತದೆ" ಎಂದು ಹೇಳಿ ಪಟೇಲನ ಮಗನ ಬಾಯಿಗೆ ಏನೋ ಔಷಧವನ್ನು ಹಾಕಿದನು.

ಪಟೇಲನು ಸಾಧುವಿಗೆ ಹತ್ತು ವರಹಗಳನ್ನು ಕೊಟ್ಟನು. ಆದರೆ ಪಟೇಲನ ಮಗ ಎಚ್ಚರವಿಲ್ಲದೆ ಬಿದ್ದ ಹಾಗೆಯೇ ಬಿದ್ದಿದ್ದನು.

"ಈ ಊರಿನಲ್ಲಿ ಯಾರ ಹತ್ತಿರವೂ ನ್ಯಾಯಶುದ್ಧವಾದ ಹಣವೇ ಇಲ್ಲ. ಪಾಪ ಮಾಡುವ ಜನರೇ ಹೆಚ್ಚಾದರು. ಇದು ಬಹಳ ಚಿಂತಿಸಬೇಕಾದ ವಿಷಯ" ಎಂದನು ಸಾಧು.

"ಸಾಹುಕಾರನ ಮಗನ ರೋಗವು ಪಾಪಣ್ಣನು ಕೊಟ್ಟ ಹಣದಿಂದ ಗುಣವಾಗಿದ್ದಿತಷ್ಟೆ? ನಾನು ಅವನ ಹತ್ತಿರ ಹೋಗಿ ಆ ಹಣವನ್ನು ತೆಗೆದುಕೊಂಡು ಬರುತ್ತೇನೆ" ಎಂದು ಪಟೇಲನು ಅಲ್ಲಿಗೆ ಹೊರಟನು.

ಆಗ ಸಾಧು ಅವನನ್ನು ತಡೆದು, "ನಾನು ಹೇಳುವುದನ್ನು ಲಕ್ಷ್ಯಗೊಟ್ಟು ಕೇಳು. ಪಾಪಣ್ಣನು ಸಾಹುಕಾರನಿಗೆ ನಾಲ್ಕು ಬೆಳ್ಳಿಯ ನಾಣ್ಯಗಳನ್ನು ಕೊಟ್ಟಿರುತ್ತಾನೆ. ಅದು ನ್ಯಾಯವಾದ ಹಣವೆನ್ನುವುದರಲ್ಲಿ ಸಂದೇಹವೇನಿಲ್ಲ. ಆದರೆ ಸಾಹುಕಾರನು ಅವುಗಳನ್ನು ಪಾಪಣ್ಣನಿಗೆ ತನ್ನ ಮಗನ ರೋಗ ಗುಣವಾದುದಕ್ಕೆ ಬಹುಮಾನವಾಗಿ ಕೊಟ್ಟಿದ್ದಾನೆ. ಆದುದರಿಂದ ಈಗ ಅದು ನ್ಯಾಯವಾದ ಹಣವಾಗುವುದಿಲ್ಲ. ಬಹುಮಾನಕ್ಕೂ ಕಷ್ಟದ ಸಂಪಾದನೆಗೂ

ವ್ಯತ್ಯಾಸವಿದೆ. ಪಾಪಣ್ಣನ ಹತ್ತಿರ ಬೇರೇನಾದರೂ ಹಣವಿದ್ದರೆ ಕೇಳಿ ತೆಗೆದುಕೊಂಡು ಬಾ" ಎಂದನು.

ಪಟೇಲನು ಪಾಪಣ್ಣನ ಮನೆಗೆ ಹೋಗಿ ಸಾಧು ಹೇಳಿದ ಮಾತುಗಳನ್ನು ಹೇಳಿ, ಬೇರೆ ನ್ಯಾಯದ ಹಣವನ್ನು ಕೇಳಿದನು. ಪಾಪಣ್ಣನು ಚಿಂತಿಸುತ್ತ, "ನಾನೇನು ಮಾಡಲಿ ? ನನ್ನ ಹತ್ತಿರ ಸಾಹುಕಾರ್ರು ಕೊಟ್ಟ ಆ ನಾಲ್ಕು ಬೆಳ್ಳಿ ನಾಣ್ಯಗಳ ಹೊರತು ಬೇರೆ ಹಣವೇ ಇಲ್ಲ" ಎಂದನು.

ಉಪಾಯವಿಲ್ಲದೆ ಪಟೇಲನು ಪಾಪಣ್ಣನು ಕೊಟ್ಟ ಆ ನಾಲ್ಕು ನಾಣ್ಯಗಳನ್ನೇ ತೆಗೆದುಕೊಂಡು ಬಂದು, ಸಾಧುವಿನೊಂದಿಗೆ ಪಾಪಣ್ಣ ಹೇಳಿದ ಸಂಗತಿಯನ್ನು ಹೇಳದೆ, ಆ ಹಣವನ್ನು ಸಾಧುವಿನ ಕೈಗೆ ಕೊಟ್ಟನು.

ಮರುಕ್ಷಣದಲ್ಲೇ ಪಟೇಲನ ಮಗನು ಚುರುಕಾಗಿ ಮಂಚದಿಂದೆದ್ದು ಹಾರಿದನು. ಅವನ ರೋಗ ಹಾರಿಹೋಗಿತ್ತು !

ಪಟೇಲನು ಆಶ್ಚರ್ಯದಿಂದ ಸಾಧುವಿನೊಂದಿಗೆ, "ಸ್ವಾಮಿ, ಪಾಪಣ್ಣನ ಹಣದಲ್ಲಿ ಏನೋ ಮಹಿಮೆ ಇದ್ದಿರಬೇಕು. ಅವನ ಹತ್ತಿರ ಬೇರೆ ಯಾವ ಹಣವೂ ಇಲ್ಲವೆಂದು ಹೇಳಿ ಸಾಹುಕಾರ್ರು ಅವನಿಗೆ ಬಹುಮಾನ ಕೊಟ್ಟ ಹಣವನ್ನೇ ಕೊಟ್ಟಿದ್ದ" ಎಂದನು.

ಅದನ್ನು ಕೇಳಿ ಸಾಧು ಕೋಪದಿಂದ, "ಅಂದರೆ ಇದರ ಅರ್ಥ, ಸಾಹುಕಾರನು ಈ ಹಣವನ್ನು ನ್ಯಾಯವಾಗಿಯೇ ಅವನಿಗೆ ಕೊಡುವಂಥಾದ್ದೆಂದೇ ಆಯಿತು. ಧರ್ಮ ಬುದ್ಧಿಯ ಬಹುಮಾನವೇನಲ್ಲ ! ಹೀಗೆ ಅನ್ಯಾಯವಾಗಿ ಮತ್ತೊಬ್ಬರ ಹಣವನ್ನು ತಮ್ಮ ಬಳಿಯಲ್ಲಿಟ್ಟುಕೊಳ್ಳುವ ಎಲ್ಲರಿಗೂ ಹೀಗೆಯೇ ರೋಗದ ಕಾಟ ಬರುತ್ತಾ ಇರುತ್ತದೆ. ನ್ಯಾಯವಾದ ಸಂಪಾದನೆಯಷ್ಟೇ ಅವರನ್ನು ಕಾಪಾಡಬಲ್ಲುದು" ಎಂದು ಗಟ್ಟಿಯಾಗಿ ಹೇಳಿ ಅಲ್ಲಿಂದ ಹೊರಟುಹೋದನು.

ಸಾಧು ಹೇಳಿದ ಎಚ್ಚರಿಕೆಯ ಮಾತು ಪಟೇಲನ ಮೂಲಕವಾಗಿ ಊರೊಳಗಿದ್ದವರಿಗೆಲ್ಲ ಗೊತ್ತಾಯಿತು. ಅವರಲ್ಲಿ ಪ್ರತಿಯೊಬ್ಬರೂ ಪಾಪಣ್ಣನಿಂದ ಅಷ್ಟೋ ಇಷ್ಟೋ ಕೆಲಸ ಮಾಡಿಸಿ ಸರಿಯಾಗಿ ಹಣ ಕೊಡದೆ ಉಳಿಸಿಕೊಂಡವರೇ. ಆ ಕಾರಣದಿಂದ ಊರವರೆಲ್ಲಾ ಪರಸ್ಪರ ಮಾತಾಡಿಕೊಂಡು ಪಾಪಣ್ಣನಿಗೆ ಒಂದು ಮನೆಯನ್ನೂ ಎರಡು ಎಕರೆ ಹೊಲಗಳನ್ನೂ ಮಾಡಿಸಿಕೊಟ್ಟರು. ಪಾಪಣ್ಣನು ಲಕ್ಷ್ಮಿಯನ್ನು ಮದುವೆ ಮಾಡಿಕೊಂಡು ಕಷ್ಟಪಟ್ಟು ವ್ಯವಸಾಯ ಮಾಡುತ್ತ ಸುಖವಾಗಿದ್ದನು,

ನ್ಯಾಯವಾದ ಸಂಪಾದನೆಯ ಮಹಿಮೆಯನ್ನು ಕಣ್ಣಾರೆ ನೋಡಿದ ಊರ ಜನರು ಕೂಡಾ, ನ್ಯಾಯಮಾರ್ಗದಲ್ಲೇ ಬದುಕಲು ತೊಡಗಿ, ರೋಗಗಳ ಕಾಟವಿಲ್ಲದೆ ಸುಖಪಟ್ಟರು.





# ಕಮಲಮ್ಮನ ಉಳಿತಾಯ

ಕಮಲಮ್ಮಳೂ ನಾರಣಪ್ಪನೂ ಅನ್ಯೋನ್ಯ ದಂಪತಿಗಳು. ಒಂದು ದಿನ ಅವರ ಬಂಧುಗಳೊಬ್ಬರ ಮನೆಯಲ್ಲಿ ನಡೆದ ಏನೋ ಒಂದು ಶುಭ ಸಮಾರಾಧನೆಗಾಗಿ ನೆರೆಯ ಊರಿಗೆ ಹೋಗಿದ್ದರು. ಅಲ್ಲಿಂದ ಅವರು ಹಿಂದಿರುಗಿ ಬರುವ ದಿನ, ಆ ಊರಿನಲ್ಲಿ ಸಂತೆ ನಡೆಯುತ್ತಿದ್ದಿತು. ಅಲ್ಲಿ ಅನೇಕ ಬಗೆಯ ಬಾಳೇಗೊನೆಗಳನ್ನು ಮಾರಲಿಕ್ಕೆ ಇಟ್ಟಿದ್ದರು. ಬೆಲೆ ಬಹಳ ಅಗ್ಗವಾಗಿತ್ತು. ಇಷ್ಟೊಂದು ಅಗ್ಗಕ್ಕೆ ಸಿಕ್ಕುವ ಬಾಳೇಗೊನೆಗಳನ್ನು ಕೊಂಡುಕೊಂಡು ತೀರಲೇಬೇಕೆಂದು ಕಮಲಮ್ಮನಿಗೆ ತೋರಿತು.

ಅವಳು ಗಂಡನೊಂದಿಗೆ, "ನೋಡಿದಿರಾ ? ಇಲ್ಲಿ ಬಾಳೇಗೊನೆ ಎಷ್ಟು ಅಗ್ಗ ! ನಾವು ಒಂದು ಗೊನೆ ತೆಗೆದುಕೊಂಡು ಹೋಗಿಬಿಡುವ" ಎಂದಳು.

"ಇಡೀ ಗೊನೆ ನಾವೇನು ಮಾಡೋಣ ? ನಮಗೆ ಮನೆ ತುಂಬ ಮಕ್ಕಳೆ, ಮರಿಗಳೆ ? ಆ ಹುಚ್ಚು ಬಿಡು" ಎಂದನು ನಾರಣಪ್ಪ.

"ದೋರೆಗಾಯಿಯಾಗಿರುವ ಗೊನೆ ನೋಡಿ ಕೊಂಡುಕೊಂಡರೆ, ಹದಿನೈದು ದಿನಗಳವರೆಗೆ ನಿಂತಿರುತ್ತದೆ. ಇಲ್ಲಿ ನಾಲ್ಕು ರೂಪಾಯಿಗೆ ದೊರೆಯುವ ಗೊನೆಗೆ, ನಮ್ಮೂರಲ್ಲಿ ಹತ್ತು ರೂಪಾಯಿ ಕೊಟ್ಟರೂ ಸಿಗೋದಿಲ್ಲ. ಎಷ್ಟು ಉಳಿತಾಯ ಆಗುತ್ತೆ ಅಂತ ನೀವೇ ನೋಡಿ. ಸುಮ್ಮನೆ ನನ್ನನ್ನು ಹುಚ್ಚೀ ಅನ್ನಬೇಡಿ" ಎಂದಳು ಕಮಲಮ್ಮ.

ಅವಳ ಒತ್ತಾಯದಿಂದ ನಾರಣಪ್ಪನು ಒಂದು ಗೊನೆಯನ್ನು ಕೊಂಡುಕೊಳ್ಳಲೇ ಬೇಕಾಯಿತು. ಅದನ್ನು ಹೆಗಲ ಮೇಲೆ ಹೊತ್ತುಕೊಂಡು ನಡೆಯಲೂ ಬೇಕಾಯಿತು. ಹೆಂಡತಿ ಹೇಳುವಂತೆ ಉಳಿತಾಯದ ಮಾತು ಹೇಗಿದ್ದರೂ, ಅದನ್ನು ಹೊತ್ತುಕೊಂಡು ನಡೆಯುವುದು ಬಹಳ ಕಷ್ಟವೆನಿಸಿತು. ಉಳಿತಾಯದ ಲೆಕ್ಕ ಸರಿಯಾಗಿ ಬರಬೇಕಾದರೆ, ಕೂಲಿಯವನಿಗೆ ದುಡ್ಡು ಕೊಟ್ಟರೆ ಆಗುತ್ತದೆಯೇ ? ಗಂಡಸಾದವನಿಗೆ ಒಂದು ಗೊನೆ ಹೊರುವುದು ಕಷ್ಟವೆ ? ಹೀಗೆಲ್ಲ ಹೆಂಡತಿ ಹೇಳಿದ್ದರಿಂದ ನಾರಣಪ್ಪನು ಹಾಗೆ ಹೊತ್ತುಕೊಂಡಿದ್ದನು. ಮಧ್ಯ ದಾರಿಯಲ್ಲಿ ಕೆಳಗಿಳಿಸಿಬಿಟ್ಟನು.

ಅರ್ಧ ದಾರಿಯವರೆಗೆ ಗಂಡನೇ ಹೊತ್ತುದರಿಂದ ಕಮಲಮ್ಮನಿಗೆ ಬಹಳ ಸಂತೋಷವಾಯಿತು. ಇಲ್ಲದಿದ್ದರೆ ಸಂತೆಯಿಂದ ತಮ್ಮ ಊರಿನವರೆಗೆ ಕೂಲಿ

ಕೆ. ವಿ. ಸುಬ್ಬರಾವು

ಯವನಿಗೆ ಎರಡು ರೂಪಾಯಿ ಕೊಡಬೇಕಾಗುತ್ತಿತ್ತು. ಇನ್ನು ಒಂದು ರೂಪಾಯಿ ಕೂಲಿ ಕೊಟ್ಟರೆ ಗೊನೆ ಮನೆಗೆ ಸೇರುತ್ತದೆ.

ದಾರಿಯಲ್ಲಿ ಸಿಕ್ಕಿದ ಕೂಲಿಯವನಿಗೆ ಒಂದು ರೂಪಾಯಿ ಕೂಲಿ ಮಾತಾಡಿ, ಆ ಬಾಳೆಗೊನೆಯನ್ನು ತಮ್ಮ ಮನೆಗೆ ಸೇರಿಸಿಕೊಂಡರು ಆ ದಂಪತಿಗಳು. ಹೀಗೆ ಕೂಲಿಯಲ್ಲಿ ಅರ್ಧಕ್ಕರ್ಧ ಉಳಿತಾಯವಾಯಿತೆಂದು ಕಮಲಮ್ಮನಿಗೆ ಬಹಳ ಹರ್ಷವಾಯಿತು.

ಮರುದಿನದಿಂದ ಬಾಳೆಯ ಕಾಯಿಗಳು ಹಣ್ಣಾಗಲು ಪ್ರಾರಂಭವಾದುವು. ಆ ಹಣ್ಣುಗಳು ಬಹಳ ರುಚಿಯಾಗಿದ್ದುದರಿಂದ ಗಂಡಹೆಂಡಿರು ಅವುಗಳನ್ನು ತಿನ್ನತೊಡಗಿದರು. ಎಂದಿಗಿಂತ ಹೆಚ್ಚಾಗಿ ತಿಂದು ಬಿಟ್ಟುದರಿಂದ, ಮರುದಿನ ಇಬ್ಬರಿಗೂ ಹಸಿವೆ ಮಂದವಾಯಿತು. ಊಟದ ಮೇಲೆ ಮನಸ್ಸು ಹೋಗಲಿಲ್ಲ.

ಆಗ ಕಮಲಮ್ಮ ಗಂಡನೊಂದಿಗೆ, "ನೋಡಿದಿರಾ, ಈ ಬಾಳೇಹಣ್ಣುಗಳಿಂದಾಗಿ ಊಟ ಪದಾರ್ಥಗಳ ಖರ್ಚು ಕಡಿಮೆಯಾಯಿತು. ಅದೂ ನಮಗೆ ಲಾಭ ತಾನೇ ?" ಎಂದಳು. ಬಾಳೇಹಣ್ಣಿನಿಂದ ಬಾಯಿರುಚಿಗೆಟ್ಟ ನಾರಣಪ್ಪನು ಬೇಸರದ ಮೋರೆಯಿಂದ, "ಬಂದ ಲಾಭವೇ ಸಾಕಪ್ಪ. ಈ ಉಳಿದ ಹಣ್ಣುಗಳನ್ನು ನೆರೆಕರೆಯವರಿಗೆ ಕೊಟ್ಟುಬಿಡೋಣ. ಅವರಾದರೂ ತಿಂದು ಸಂತೋಷಪಡಲಿ" ಎಂದನು.

ಅದಕ್ಕೆ ಕಮಲಮ್ಮ ಒಪ್ಪಲಿಲ್ಲ, "ಅಷ್ಟು ದೂರದಿಂದ ಅಗ್ಗದಲ್ಲಿ ಹಣ್ಣುಗಳನ್ನು ತರಿಸಿದ್ದು ಅವರಿವರಿಗೆ ದಾನ ಮಾಡಲಿಕ್ಕೇನು ?" ಎಂದಳು.

ಮತ್ತೆ ಎರಡು ದಿನಗಳಲ್ಲಿ ಗೊನೆಯಲ್ಲಿದ್ದ ಎಲ್ಲ ಕಾಯಿಗಳೂ ಹಣ್ಣಾದುವು. ಎರಡು ಹೊತ್ತೂ ಆ ಗಂಡಹೆಂಡಿರು ಊಟಕ್ಕೆ ಬದಲು ಬಾಳೇಹಣ್ಣುಗಳನ್ನೇ ತಿಂದರು. ಒಂದು ಹಣ್ಣು ಕೂಡಾ ವೃಥಾ ಕಳೆದುಕೊಳ್ಳಬಾರದೆಂದು ಕಮಲಮ್ಮ ಹೇಳಿಬಿಟ್ಟಳು.

ಹೆಂಡತಿಯ ಹಟದಂತೆಯೇ ನಡೆಯಿತು. ಮೂರು ದಿನಗಳವರೆಗೆ ಅಡಿಗೆಯೇ ಮಾಡಲಿಲ್ಲ. ಸೇರದಿದ್ದರೂ, ಬಿಡದೆ ತಿಂದರು. ಅಂತೂ ಗೊನೆಯ ಹಣ್ಣುಗಳೆಲ್ಲಾ ಅವರ ಹೊಟ್ಟೆಗೇ ಹೋದುವು.



ಆಮೇಲೆ ಅವರಿಬ್ಬರಿಗೂ ವಿಪರೀತವಾದ ಅಜೀರ್ಣವೂ "ಅಯ್ಯೋ, ಅಮ್ಮಾ!" ಅನಿಸುವಂತಹ ಹೊಟ್ಟೆನೋವೂ ಬಂದಿತು.

"ನೋಡಿದೆಯಾ? ನಿನ್ನ ಉಳಿತಾಯ ಎಷ್ಟರ ಮಟ್ಟಿಗೆ ಬಂದಿತೋ ಗೊತ್ತಾಯಿತೆ? ಈಗ ವೈದ್ಯರಿಗೂ ಮದ್ದುಗಳಿಗೂ ಆಗುವ ಖರ್ಚು ಲೆಕ್ಕ ಹಾಕಿ ನೋಡು. ನಿನ್ನ ಉಳಿತಾಯವನ್ನು ಮೀರಿ ಹೋಗುತ್ತೆ" ಎಂದನು ನಾರಣಪ್ಪ.

"ಅದು ನಿಜಾನ್ನಿ. ಅದಕ್ಕೆ ಪರಿಹಾರ ಒಂದೇ ಒಂದು. ಮನಸ್ಸು ಕಲ್ಲು ಮಾಡಿ ನಾವು ಉಪವಾಸ ಇದ್ದುಬಿಡುವ. ಲಂಘನಂ ಪರಮೌಷಧ ಅಂತ ಹೇಳುತ್ತಾರಷ್ಟೆ?" ಎಂದಳು ಕಮಲಮ್ಮ.

ಅದಕ್ಕೆ ನಾರಾಯಣನು ಒಪ್ಪದೆ, "ಹಾಗೆ ಉಪವಾಸ ಇದ್ದರೆ ನಿತ್ರಾಣವಾಗುತ್ತೆ. ಬೇರೆ ರೋಗ ಬರುತ್ತೆ. ಅಜೀರ್ಣದಿಂದ ಊಟದ ಇಷ್ಟವಿಲ್ಲದೆ ಉಪವಾಸವೇ ಇರುವಾಗ ಅದು ಔಷಧ ಹೇಗಾಗುತ್ತೆ? ಈ ರೋಗ ನಾನು ತಾಳಲಾರೆನಪ್ಪ" ಎಂದು ನಾರಣಪ್ಪನು ವೈದ್ಯನ ಮನೆಗೆ ಹೋದನು.

ವೈದ್ಯನು ಎರಡು ರೂಪಾಯಿ ಪಡೆದು ಕೆಲವು ಗುಳಿಗೆಗಳನ್ನು ಕೊಟ್ಟು, ಹೊತ್ತಿಗೆ ಎರಡೆರಡರಂತೆ ನುಂಗಲು ಹೇಳಿದನು. ನಾರಣಪ್ಪನು ಅವುಗಳನ್ನು ಮನೆಗೆ ತಂದು ಹೆಂಡತಿಯೊಂದಿಗೆ ಅದನ್ನೆಲ್ಲ ಹೇಳಿ, ಮಾತ್ರೆಗಳನ್ನು ಕೊಟ್ಟು ನುಂಗಲು ಒಪ್ಪಿಸಿದನು.

ಎರಡು ದಿನಗಳಲ್ಲಿ ನಾರಣಪ್ಪನ ಹೊಟ್ಟೆನೋವು ಕಡಿಮೆಯಾಯಿತು. ಆದರೆ ಕಮಲಮ್ಮನಿಗೆ ಇನ್ನೂ ಹೆಚ್ಚೇ ಆಯಿತು.

ಉಳಿತಾಯದ ಬುದ್ಧಿವಂತಳಾದ ಕಮಲಮ್ಮ ವೈದ್ಯನು ಹೇಳಿದಂತೆ ಹೊತ್ತಿಗೆ ಎರಡು ಮಾತ್ರೆ ತೆಗೆದುಕೊಳ್ಳದೆ, ಒಂದೊಂದೇ ತೆಗೆದುಕೊಂಡುದರಿಂದ, ವೈದ್ಯನ ಗುಳಿಗೆಗಳು ಉಪಯೋಗವಿಲ್ಲದಂತೆಯೇ ಆಗಿತ್ತು.

ನಾರಣಪ್ಪನು ವೈದ್ಯನನ್ನು ಮನೆಗೆ ಕರೆದುಕೊಂಡು ಬಂದನು. ಅವನು ಕಮಲಮ್ಮ ಮಾಡಿದ ಕೆಲಸ ತಿಳಿದು ನೆಗಾಡುತ್ತ, ಬೇರೆ ಕೆಲವು ಮಾತ್ರೆಗಳನ್ನು ಕೊಟ್ಟು, "ಈ ಮಾತ್ರೆಗಳನ್ನು ಉಚಿತವಾಗಿಯೇ ಕೊಡುತ್ತೇನೆ. ಹೇಳಿದ ಹಾಗೆ ಉಪಯೋಗಿಸಿದರೆ ರೋಗ ಕಡಿಮೆಯಾಗಿ, ಚುರುಕುತನ ಬರುತ್ತೆ. ಇಂಥಾದ್ದಕ್ಕೆ ಹಣ ತೆಗೆದುಕೊಳ್ಳಬಾರದೆಂದು ನನ್ನ ಗುರು ಹೇಳಿದ್ದಾರೆ" ಎಂದನು.

ಆದರೆ ನಾರಣಪ್ಪನಿಂದ ವೈದ್ಯನು ಎರಡನೇ ಸಾರಿ ಕೊಟ್ಟ ಔಷಧಕ್ಕೆ ಹಣ ತೆಗೆದುಕೊಂಡಿದ್ದನು. ಆ ಸಂಗತಿ ಕಮಲಮ್ಮನಿಗೆ ಹೇಳಬಾರದೆಂದು ಇಬ್ಬರೂ ಅಂದುಕೊಂಡಿದ್ದರು.





**ಬು**ದ್ಧನ ಆಗಮನವನ್ನು ತಿಳಿದ ಕ್ಷಣದಿಂದಲೂ ನಗರವಾಸಿಗಳಲ್ಲಿ ಒಂದು ನೂತನ ಚೈತನ್ಯವೆದ್ದಿತು. ಕಪಿಲವಸ್ತು ನಗರದ ಜನರೆಲ್ಲ ಬುದ್ಧನನ್ನು ಸ್ವಾಗತಿಸಿ ಕೊಳ್ಳಲು ತೊಡಗಿದರು. ಹಾಹಾ ಅನ್ನುವಷ್ಟರಲ್ಲಿ ಸ್ವಾಗತಾಲಂಕಾರಗಳ ಶೋಭೆಯಿಂದ ಎಲ್ಲಿ ನೋಡಿದರೂ ಹೊಸ ಪ್ರಕಾಶ ಹರಡಿತು. ಪ್ರಪಂಚಕ್ಕೆ ಜ್ಯೋತಿಯಾಗಿ ನಿಂತ ಬುದ್ಧದೇವನು ತಮ್ಮ ನಗರಕ್ಕೆ ಸೇರಿದವನೆಂದುಕೊಂಡು ಪೌರರು ಅನುಭವಿಸುವ ಆನಂದಕ್ಕೆ ಮೇರೆಯಿರಲಿಲ್ಲ. ತಮ್ಮನ್ನು ಆಳುವವನಾಗಿ ಬರಬೇಕಾದ ಸಿದ್ಧಾರ್ಥ ರಾಜಕುಮಾರನು ಪ್ರಪಂಚದ ಸರ್ವ ಮಾನವಾಳಿಯ ಮಾನವತ್ವಕ್ಕೆ ಚಕ್ರವರ್ತಿಯಾಗಿ ಬರುವನೆಂದು ಜನರೆಲ್ಲ ಆನಂದದಿಂದ ಉಕ್ಕುವ ಹೃದಯಗಳಿಂದ ದಾರಿಯುದ್ದಕ್ಕೂ ಹೂವಿನ ಹಾಸಿಗೆ ಹಾಸಿದರು.

ಕುಮಾರನನ್ನು ಆಲಿಂಗಿಸಿಕೊಳ್ಳುವ ಭಾಗ್ಯ ಬಂದಿತೆಂದುಕೊಂಡು ವೃದ್ಧನಾದ ಶುದ್ಧೋದನ ಮಹಾರಾಜನ ಪಿತೃ ಹೃದಯವು ತವಕಿಸಿಕೊಂಡಿದ್ದಿತು.

ಬುದ್ಧನು ಅಲ್ಲಿಗೆ ಬರುತ್ತಿದ್ದನು. ತಲೆ ಎತ್ತಿಕೊಂಡು, ಅರ್ಧನಿಮೀಲಿತ ನೇತ್ರಗಳಿಂದ, ಶಾಂತ ಗಂಭೀರ ಕ್ರಮದ ನಡಿಗೆಯಲ್ಲಿ, ನಿಶ್ಚಲ ಭಾವದ ವದನಮಂಡಲದಿಂದೊಪ್ಪುವ ಕರುಣಾಮೂರ್ತಿಯಾಗಿ ಬುದ್ಧನು ಬರುತ್ತಿದ್ದನು. ಅವನ ಹಿಂದೆ "ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ" ಎಂಬ ದಿವ್ಯ ವಾಕ್ಯಗಳನ್ನುಚ್ಚರಿಸುತ್ತ ಅಸಂಖ್ಯ ಜನ ಸಂದೋಹವು ಮಾಡುವ ಧ್ಯಾನವು ಗಂಭೀರವಾದ ಸಮುದ್ರ ಘೋಷದಂತೆ ಕೇಳಿ ಬರತೊಡಗಿತು. ಭೂಮಿಯೇ ಜನಸಮುದ್ರವಾಗಿ ಬರುತ್ತಿದ್ದಿತು.

ರಾಜಾ ಶುದ್ಧೋದನನೂ, ಯಶೋಧರೆ, ರಾಹುಲರೂ ರಾಜಪ್ರಾಸಾದದ ಸೋಪಾನಗಳನ್ನು ಇಳಿದು ಇದಿರು ನೋಡಿಕೊಂಡು ನಿಂತರು. ಚೆನ್ನನು ಪ್ರಾಂಗಣದ ಮುಂದೆ ಬಂದು ನಿಂತುಕೊಂಡು ಆನಂದಾಶ್ರುಗಳನ್ನು ಸುರಿಸುತ್ತ ಇದಿರು ನೋಡಿಕೊಂಡಿದ್ದನು.



ಬುದ್ಧನು ಭಿಕ್ಷಾ ಪಾತ್ರೆಯನ್ನು ಹಿಡಿದುಕೊಂಡು ರಾಜಪ್ರಾಸಾದದ ಹತ್ತಿರ ಬಂದನು. ರಾಹುಲನು ಓಡುತ್ತ ಬಂದು ತಂದೆಯ ಪಾದಗಳ ಮೇಲೆ ಅಡ್ಡ ಬಿದ್ದನು. ಯಶೋಧರೆ ಚಿರಕಾಲದ ಮೇಲೆ ಕಾಣಿಸುವ ತನ್ನ ಗಂಡನ ಪ್ರಸನ್ನ ವದನವನ್ನು ತದೇಕ ದೃಷ್ಟಿಯಿಂದ ನೋಡುತ್ತಾ ಹಾಗೆಯೇ ಅವನ ಮುಂದೆ ಮುಂಡುಗಾಲೂರಿದಳು. ಅವನ ಪಾದಗಳ ಮೇಲೆ ತಲೆಯನ್ನು ಅಂಟಿಸಿ ಕಣ್ಣಿಗೆ ತಾಗಿಸಿಕೊಂಡಳು. ಅವಳು ಕಣ್ಣುಗಳಿಂದ ಉದುರಿದ ಆನಂದಬಾಷ್ಪ ಜಲದಿಂದ ಬುದ್ಧನ ಪಾದಗಳನ್ನು ತೊಳೆದಳು.

ಬುದ್ಧನನ್ನು ಆಲಿಂಗನ ಮಾಡಿಕೊಳ್ಳಲಿಕ್ಕಾಗಿ ಕೈಗಳನ್ನು ಚಾಚಿದ ಶುದ್ಧೋದನನು, ಅವನ ಪರಿವ್ರಾಜಕ ರೂಪವನ್ನೂ, ಭಿಕ್ಷಾ ಪಾತ್ರವನ್ನೂ ನೋಡಿ ಹಾಗೆಯೇ ಬುದ್ಧಿ ಮಂಕಾದವನಂತೆ ನಿಶ್ಚೇಷ್ಟಿತನಾದನು. ಆ ವೃದ್ಧ ರಾಜನ ಮನಸ್ಸು ಭಿಕ್ಷುವಾಗಿ ಬಂದು ನಿಂತ ಕುಮಾರನನ್ನು ನೋಡಿ ವಿಲವಿಲನೆ ಒದರಿಕೊಂಡಿತು. ದಳದಳ ಕಣ್ಣೀರಿಳಿಯಿತು. ಆನಂದಬಾಷ್ಪವು ತಳಮಳದಿಂದ ಮಸಕಾಯಿತು. ಆಲಿಂಗಿಸಲು ಚಾಚಿದ ಕೈಗಳು ಚಲನವಿಲ್ಲದೆ ಹಾಗೆಯೇ ಉಳಿದುವು.

"ಅಪ್ಪಾ ! ಕಂದಾ ! ಕುಮಾರಾ ! ಸಿದ್ಧಾರ್ಥಾ ! ಗೌತಮಾ !" ಎನ್ನುತ್ತ, ಶುದ್ಧೋದನನು ಹುಚ್ಚನ ಹಾಗೆ ಕೊರಳೆತ್ತಿ ಕರೆಯುತ್ತ, ಹಾಗೆಯೇ ಕುಸಿದು ಮೂರ್ಛೆ ಹೋದನು.

ಬುದ್ಧನು ಕುಳಿತು, ತಂದೆಯ ತಲೆಯನ್ನು ತನ್ನ ಮಡಿಲಲ್ಲಿಟ್ಟುಕೊಂಡು ತನ್ನ ಕಾಷಾಯ ಉತ್ತರೀಯದಿಂದ ಗಾಳಿ ಬೀಸಿದನು. ಕುಮಾರನ ಅಮೃತ ಸ್ಪರ್ಶದಿಂದ ಶುದ್ಧೋದನನು ಎಚ್ಚರಕ್ಕೆ ಬಂದನು. "ಅಪ್ಪಾ, ನನ್ನ ಪ್ರಣಾಮವನ್ನು ಸ್ವೀಕರಿಸಿರಿ. ನಾನು ಸಿದ್ಧಿಸಿದ ಅರ್ಥದೊಂದಿಗೆ ಸಿದ್ಧಾರ್ಥನಾಗಿ ಬಂದಿದ್ದೇನೆ" ಎಂದು ಹೇಳುವ ಬುದ್ಧನ ಮಾತುಗಳು ಅಮೃತ ಸಿಂಚನಗಳಾಗಿ ಶುದ್ಧೋದನನ ಕಿವಿಗಳಿಗೆ ಬಿದ್ದುವು. ಬುದ್ಧನ ಅರ್ಧನಿಮೀಲಿತ ಕಣ್ಣುಗಳಿಂದ ಚಂದ್ರಕಿರಣಗಳು ಹೊರಡುತ್ತಿದ್ದುವು. ಮುಖದಲ್ಲಿ ಅಪೂರ್ವವಾದ ತೇಜಸ್ಸು ಕಾಣತೊಡಗಿತು. ಯಾವುದೋ ಅನಿರ್ವಚನೀಯವಾದ ಪ್ರಭಾವವು ಶುದ್ಧೋದನನನ್ನು ಉತ್ತೇಜಿತನನ್ನಾಗಿ ಮಾಡಿತು. ಅಶಾಂತಿಯಿಂದ ಶಾಂತಿಗೆ, ಕತ್ತಲೆಯಿಂದ ಬೆಳಕಿಗೆ, ಭ್ರಮೆಯಿಂದ ಸತ್ಯದೆಡೆಗೆ ಅವನನ್ನು ಒಯ್ಯುತ್ತಿದ್ದಿತು. "ಬುದ್ಧಂ ಶರಣಂ ಗಚ್ಛಾಮಿ...." ಎಂಬ ಮಾತುಗಳು ಅವನ ಕಿವಿಯಲ್ಲಿ ಮಾರ್ಮೊಳಗುತ್ತಿದ್ದುವು. ಶುದ್ಧೋದನನ ನಾಲಗೆಯೂ ಅಲುಗುತ್ತ ಅದನ್ನೇ ಹೇಳತೊಡಗಿತು. ರಾಹುಲನು ಕೂಡಾ ಅದನ್ನೇ ಉಚ್ಚರಿಸುತ್ತಿದ್ದನು. ಪ್ರಜಾನೀಕವು ಕೂಡಾ ಹಾಗೆಯೇ ಘೋಷಿಸಿಕೊಂಡಿದೆ. ಯಶೋಧರೆ ಕಣ್ಣುಗಳನ್ನು ಮುಚ್ಚಿಕೊಂಡು ಎದೆಯ ಮೇಲೆ ಕೈಗಳನ್ನಿಟ್ಟು,

ಧ್ಯಾನಮುದ್ರೆಯಲ್ಲಿ "ಬುದ್ಧಂ ಶರಣಂ ಗಚ್ಛಾಮಿ" ಎಂದು ಜಪಿಸುತ್ತಿದ್ದಳು.

ಆಗ ಬುದ್ಧನು ರಾಹುಲನ ತಲೆಯನ್ನು ನೀವುತ್ತ, "ಕುಮಾರಾ! ನೀನು ಕೂಡಾ ಬುದ್ಧನಾಗಿ ಧರ್ಮವನ್ನೂ, ಸಂಘವನ್ನೂ ಅನುಸರಿಸುತ್ತ ಮಾನವತೆಗೆ ಸಾರ್ಥಕತ್ವ ತರಬೇಕೆಂದು ಆಶೀರ್ವಾದ ಮಾಡುತ್ತೇನೆ, ಬುದ್ಧನೆಂದರೆ ಯಾರು ಗೊತ್ತೇ? ನೀನು ಅಂದುಕೊಳ್ಳುವ ಹಾಗೆ ನಾನು ಮಾತ್ರವೇ ಬುದ್ಧನಲ್ಲ. ಉತ್ತಮ ಧರ್ಮಗಳನ್ನು, ಅಹಿಂಸೆಯನ್ನು ಆದರಿಸುವವರೆಲ್ಲರೂ ಬುದ್ಧರೇ, ಬುದ್ಧತ್ವವೇ ಮಾನವತ್ವ. ಬುದ್ಧತ್ವಗೊಂಡ ಮಾನವನೇ ಬುದ್ಧನು. ಅಂತಹ ಮಾನವ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವ ಬುದ್ಧನೇ ಈ ಲೋಕಕ್ಕೆ ಈಗ ಬೇಕಾದವನು. ಜೀವಕೋಟಿಗೆ ಅಂತಹ ಬುದ್ಧನೇ ಶರಣ್ಯನು. ಬುದ್ಧರು ಉಪದೇಶಿಸಿದ ಧರ್ಮಗಳೇ ಮಾನವಾಳಿಗೆ ನಿಜವಾದ ಶಾಂತಿಯನ್ನು ಕೊಡುತ್ತವೆ. ಧರ್ಮವೇ ಲೋಕಕ್ಕೆ ಶರಣ್ಯವು. ಬುದ್ಧರೊಂದಿಗೆ ಕೂಡಿದ ಸಂಘವೇ ಈ ಜಗತ್ತಿಗೆ ಶರಣ್ಯವು. ಬುದ್ಧ ಸಂಘ ಸಮುದಾಯಗಳೇ ಯುಗಧರ್ಮವನ್ನು ಉದ್ಧರಿಸಿಕೊಂಡು ಹೋಗುವಂಥವು" ಎಂದು ಹೇಳಿದನು.

ಈಗ ಯಶೋಧರೆ ಕಣ್ಣುಗಳನ್ನು ಅರಳಿದ ಕಮಲದಂತೆ ಅಗಲವಾಗಿ ಬಿಡಿಸಿ ಬುದ್ಧನ ಮುಖವನ್ನು ನಿಶ್ಚಲವಾಗಿ ನೋಡುತ್ತ, "ಸ್ವಾಮಿ, ನನ್ನನ್ನು ನಿಮಗೆ ಭಿಕ್ಷೆಯಾಗಿ ಸಮರ್ಪಿಸಿಕೊಳ್ಳುತ್ತೇನೆ. ಇದುವರೆಗೆ ನಾನು ಗೃಹಿಣಿಯಾಗಿದ್ದೆನು. ಈಗ ನಾನು ಮಾನವ ಸೇವಾ ಧರ್ಮಕ್ಕೆ ಅಂಕಿತಳಾಗುವ ಪರಿವ್ರಾಜಿಕೆಯಾಗುವೆನು. ನಿಮ್ಮ ಅಡಿಗಳ ಜಾಡಿನಲ್ಲಿ ಜೀವಿಸುವುದೇ ನನ್ನ ಧರ್ಮ. ಮಾನವರ ಒಂದು ಭಾಗವಾದ ಸ್ತ್ರೀಯರನ್ನು ಕೂಡಾ ಬೌದ್ಧರು ಆದರಿಸಬೇಕಲ್ಲವೆ? ಸ್ತ್ರೀಯರಿಗೆ ಬೌದ್ಧ ಸಂಘದಲ್ಲಿ ಅರ್ಹತೆಯನ್ನೂ, ಸ್ಥಾನವನ್ನೂ ಪ್ರಸಾದಿಸಬೇಕು



ಸ್ವಾಮೀ" ಎಂದು ಪ್ರಾರ್ಥಿಸುತ್ತಾ, ಭಕ್ತಿಯಿಂದ ಪ್ರಣಾಮ ಮಾಡಿದಳು.

ಆ ವಿಧವಾಗಿ ಯಶೋಧರೆ ಬೌದ್ಧ ಧರ್ಮವನ್ನು ಸ್ವೀಕರಿಸಿದ ಪ್ರಥಮ ಮಹಿಳೆಯಾದಳು.

ಚೆನ್ನನು ಇದನ್ನೆಲ್ಲ ಆನಂದಬಾಷ್ಪಗಳುದುರುವ ನೆನೆಗಣ್ಣುಗಳಿಂದ ನೋಡುತ್ತ ನಿಂತಿರುವುದನ್ನು ಬುದ್ಧನು ನೋಡಿದನು. ತನ್ನನ್ನು ದೇವರಂತೆ ಆರಾಧನಾಭಾವದಿಂದ ನೋಡುವ ಚೆನ್ನನನ್ನು ಬುದ್ಧನು ತನ್ನ ಬಳಿಗೆ ಕರೆದಾಗ, ಚೆನ್ನನು ಅವನ ಮುಂದೆ ಅಡ್ಡ ಬೀಳಲು ನೋಡಿದನು. ಆಗ ಬುದ್ಧನು ಅವನನ್ನು ತಡೆದು, "ಚೆನ್ನಾ, ಎಷ್ಟು ದೊಡ್ಡವನಾಗಿ ಹೋದರೂ ಚಿಕ್ಕವರೇ ದೊಡ್ಡವರನ್ನು ಗೌರವಿಸಬೇಕು, ಪೂಜಿಸಬೇಕು. ನೀನು ನನಗೆ ಈಗಲೂ ಪೂಜನೀಯನು. ನನ್ನನ್ನು ಈ ಕಪಿಲವಸ್ತುವಿಂದ ವಿಶಾಲ ವಿಶ್ವದೊಳಗೆ ದಾಟಿಸಿದ ಪುಣ್ಯಮೂರ್ತಿಯಲ್ಲವೇ ನೀನು? ನಾನು ತಿಳಿದುಕೊಂಡ



ಸತ್ಯಗಳನ್ನು ಧರ್ಮಗಳನ್ನು ಹೇಳಿದ ಮಾತ್ರಕ್ಕೆ ನನ್ನನ್ನು ಭಗವಾನನೆನ್ನುವುದಾಗಲಿ, ಹಾಗೆ ಸ್ತುತಿಸಿಕೊಳ್ಳುವುದನ್ನಾಗಲಿ ನಾನು ಇಷ್ಟಪಡಲಾರೆನು. ವ್ಯಕ್ತಿಯ ಆರಾಧನೆ ಅಗತ್ಯವಿಲ್ಲದ ಕೆಲಸ. ಭಗವಾನನೆಂಬ ಭಾವನೆಯೂ ಅಷ್ಟೇ. ಎಲ್ಲರೂ ಸಮಾನರೆಂಬ ಮಾನವ ಧರ್ಮವನ್ನು ಆಚರಿಸುವುದೇ ಬೇಕಾದುದು" ಎಂದನು.

ಬುದ್ಧನ ಮಾತುಗಳನ್ನು ಕೇಳಿ ಚೆನ್ನನು ಬೇಡಿಕೊಳ್ಳುವವನಂತೆ, "ಬುದ್ಧ ಭಗವಾನನೆಂದು ಅಂದುಕೊಳ್ಳುವುದರಲ್ಲಿಯೇ ನಮಗೆ ಬಹಳ ತೃಪ್ತಿ. ಅದರಿಂದ ಧರ್ಮಾಚರಣೆಯ ಮೇಲೂ, ಸಂಘಸೇವೆಯ ಮೇಲೂ ಅಕುಂಠಿತವಾದ ಭಕ್ತಿ ವಿಶ್ವಾಸಗಳು ಉಂಟಾಗುತ್ತವೆ. ಅನುಬಂಧವನ್ನು ಬಲಗೊಳಿಸುತ್ತದೆ. ಆದುದರಿಂದ ನಿನ್ನನ್ನು ಭಗವಾನನೆಂದು ಆರಾಧನಾಭಾವದಿಂದ ನೋಡಲಿಕ್ಕೂ ಕರೆಯಲಿಕ್ಕೂ ನಮಗಿರುವ ಸ್ವೇಚ್ಛೆಯನ್ನು ನಿರಾಕರಿಸಬೇಡ. ಬುದ್ಧತ್ವಕ್ಕೆ ಪ್ರಾರಂಭದವನಾದ ನೀನು ದೇವರಾಗಿಯೇ ಇರಬೇಕು. ಅದರಿಂದ ಯಾವ ಅಪಚಾರವೂ ಆಗದು. ತಪ್ಪೂ ಅಲ್ಲ" ಎಂದನು.

ಬುದ್ಧನು ಮೌನವಾಗಿ ತಲೆದೂಗಿದನು. ಆಗಿನಿಂದ ಬುದ್ಧನು ಬುದ್ಧ ಭಗವಾನನೆಂದೇ ಕರೆಯಲ್ಪಟ್ಟನು. ಎಲ್ಲರ ಬಾಯಿಯಲ್ಲಿಯೂ ಬುದ್ಧದೇವನಾದನು. ಉತ್ತಮ ಮಾನವನೇ ದೇವರೆಂಬ ಅರ್ಥದಲ್ಲಿ ಬುದ್ಧನು ಅದಕ್ಕೆ ತಟಸ್ಥನಾಗಿ ಸುಮ್ಮನಿರಬೇಕಾಯಿತು.

ಶಾಕ್ಯ ವಂಶದಲ್ಲಿ ಕೆಲವು ಮಂದಿಯ ಹೊರತು ಉಳಿದವರೆಲ್ಲರೂ ಬುದ್ಧ ಧರ್ಮವನ್ನು ಸ್ವೀಕರಿಸಿದರು. ಬುದ್ಧನ ಆದೇಶಗಳನ್ನು, ಉಪದೇಶಗಳನ್ನು ಪ್ರಚಾರಮಾಡಿದರು. ಅವರೆಲ್ಲ ಭಿಕ್ಷುಗಳಾಗಿ ಮಾರ್ಪಟ್ಟರು. ತಮ್ಮ ಸಂಪತ್ತುಗಳನ್ನು ಸಂಘಕ್ಕೆ ಸಮರ್ಪಣೆ ಮಾಡಿದರು. ತಮ್ಮನ್ನು ಜನಸೇವೆಗೆ ಅಂಕಿತಪಡಿಸಿಕೊಂಡರು.

ಮೊದಲಿನಿಂದಲೂ ವಿರೋಧಿಯಾಗಿದ್ದ ದೇವದತ್ತನು ಮಾತ್ರ ಸ್ಪರ್ಧೆಯಿಂದ ಬೌದ್ಧ ಧರ್ಮವನ್ನು ನಿರಸನ ಮಾಡುತ್ತ, ಬುದ್ಧನ ಮಾರ್ಗಕ್ಕೆ ವ್ಯತಿರೇಕಿಗಳಾದ ಕೆಲವರನ್ನು ಗುಂಪುಗೂಡಿಸಿಕೊಂಡು ತಿರುಗುತ್ತಿದ್ದನು. ರಾಜ ಕುಟುಂಬದವನಾದುದರಿಂದ ಅವನಿಗೂ ಹಲವರು ಕೂಡಾಳುಗಳಿದ್ದರು.

ಬುದ್ಧನು ಕಪಿಲವಸ್ತು ನಗರದಿಂದ ಹಿಂದಿರುಗಿ ಪ್ರಯಾಣ ಹೊರಟನು. ಅವನ ಅನುಯಾಯಿಗಳೊಂದಿಗೆ, ಶಿಷ್ಯರೊಂದಿಗೆ ಯಶೋಧರೆಯೂ, ರಾಹುಲನೂ ಸಹ ಹೊರಟರು.

ಹೀಗೆ ಹಿಂದಿರುಗುವ ದಾರಿಯಲ್ಲಿ ಬುದ್ಧನು ಸುಜಾತಳ ಮನೆಗೆ ಭಿಕ್ಷುವಾಗಿ ಹೋದನು. ಹೇಳಿದ ಮಾತನ್ನು ಮರೆಯದೆ ಬಂದವನನ್ನು ನೋಡಿ ಸುಜಾತಳಿಗಾದ ಆನಂದ ಅಷ್ಟಿಷ್ಟಲ್ಲ. ಬುದ್ಧನು ಸುಜಾತಳ ಕುಮಾರನಿಗೆ ಆಶೀರ್ವಾದಮಾಡಿ,



ರಾಹುಲನೊಂದಿಗೆ, "ರಾಹುಲಾ, ಈ ಹುಡುಗನು ನಿನಗೆ ತಮ್ಮನು. ನೀವಿಬ್ಬರೂ ಸ್ನೇಹಿತರಾಗಿ ಆಪ್ತರಾಗಿ, ಸೋದರರಾಗಿ, ವರ್ಣ ವಿಭೇದಗಳಿಗೆ ಅತೀತರಾಗಿ ಮಾನವತ್ವವನ್ನೂ, ವಸುಧೈವ ಕುಟುಂಬ ವೆಂಬ ನೀತಿಯನ್ನೂ ಪ್ರಪಂಚಕ್ಕೆ ಪ್ರಬೋಧಿಸ ಬೇಕು" ಎಂದು ಹೇಳಿದನು.

ಸುಜಾತೆ ಬುದ್ಧನ ಶಿಷ್ಯಳಾಗಿ ಯಶೋಧರೆ ಯೊಂದಿಗೆ ಜತೆಗೂಡಿದಳು, ಗೃಹಿಣಿಯರಾಗಿದ್ದು ಕೊಂಡೇ ಸ್ತ್ರೀಯರು ಬೌದ್ಧ ಧರ್ಮವನ್ನು ಅವಲಂಬಿಸಿ, ಮಕ್ಕಳನ್ನು ಉತ್ತಮ ಮಾನವರಾಗಿ ತಿದ್ದಿ ಬೆಳೆಸುವ ಮಾತೃಮೂರ್ತಿಗಳಾಗಿರಬೇಕೆಂದು ನಾರೀ ಲೋಕಕ್ಕೆ ಬೋಧಿಸಿ, ಧರ್ಮ ಸಂಚಾಲನೆ ಮಾಡಬೇಕಾಗಿರುವುದೆಂದು, ಯಶೋಧರೆ ಸುಜಾತೆ ಯರಿಗೆ ಬುದ್ಧನು ಆದೇಶ ಮಾಡಿದನು.

ಬುದ್ಧನು ತನ್ನ ಅನುಚರರಾದ ಶಿಷ್ಯರೆಲ್ಲರನ್ನೂ, ಧರ್ಮಚಕ್ರ ಸಂಚಾಲನೆಗೆ ನಾಲ್ಕು ದಿಕ್ಕುಗಳಿಗೂ ಕಳುಹಿಸಿದನು. ಯಶೋಧರೆಯನ್ನೂ, ರಾಹುಲ ನನ್ನೂ ಕಪಿಲವಸ್ತು ನಗರಕ್ಕೆ ಹೋಗಿ, ವೃದ್ಧನಾದ ಶುದ್ಧೋದನನನ್ನು ನೋಡಿಕೊಳ್ಳುತ್ತ, ರಾಜವಂಶ ವನ್ನು ಧರ್ಮ ಮಾರ್ಗದಲ್ಲಿ ನಡೆಯಿಸಬೇಕೆಂದು ಹೇಳಿ ಕಳುಹಿಸಿಕೊಟ್ಟನು.

ಹೀಗೆ ಎಲ್ಲರನ್ನೂ ಕಳುಹಿಸಿಕೊಟ್ಟ ಮೇಲೆ ಬುದ್ಧನು ಒಬ್ಬನೇ ಅರಣ್ಯ ಮಾರ್ಗವನ್ನು ಹಿಡಿದು ಹೋಗತೊಡಗಿದನು. ಅವನ ದಾರಿ ಘೋರಾರಣ್ಯ ದೊಳಗೆ ಹೋಯಿತು. ಆ ಅರಣ್ಯದೊಳಗೆ ಘೋರಾತಿ ಘೋರನಾದ, ಕ್ರೂರತ್ವವೇ ಮೂರ್ತಿವಂತನಾಗಿದ್ದ "ಅಂಗುಲಿಮಾಲಿ" ಎಂಬೊಬ್ಬ ದಾರಿ ದೋಚುವ ಕೊಳ್ಳೆಗಾರನಿದ್ದನು. ಮನುಷ್ಯರ ಹೆಬ್ಬೆರಳುಗಳನ್ನು ಮಾಲೆಯಾಗಿ ಸುರಿದುಕೊಂಡು ತನ್ನ ಕೊರಳಿಗೆ ಹಾಕಿಕೊಂಡವನು ಆ ಗಜಚೋರ. ಅವನ ಕಣ್ಣಿಗೆ ಬಿದ್ದು ಅವನಿಗೆ ಹೆದರಿ ಶರಣಾಗಿ ಜೀವ ಉಳಿಸಿ ಕೊಂಡವರದು, ಅಥವಾ ಅವನಿಂದ ದೋಚಲ್ಪಟ್ಟು ಪ್ರಾಣ ಕಳೆದುಕೊಂಡವರದು ಆ ಹೆಬ್ಬೆರಳುಗಳು! ಅವನ ಕಣ್ಣಿಗೆ ಬಿದ್ದವರು ಹೆಬ್ಬೆರಳು ಕಳೆದು ಕೊಳ್ಳಲೇಬೇಕು.

ತನಗೆ ಹೆದರದವರು ಯಾರೂ ಈ ಭೂಮಿ ಯಲ್ಲಿರಬಾರದೆಂಬುದು ಅಂಗುಲಿಮಾಲಿಯ ಉದ್ದೇಶ.

ಒಬ್ಬನೇ ಆ ಕಾಡಿನೊಳಗೆ ಹೋಗುವ ಬುದ್ಧ ನನ್ನು ನೋಡಿ, ದಾರಿಯಲ್ಲಿ ಕೆಲವು ಕುರುಬ ಹುಡುಗರು, "ಸ್ವಾಮೀ, ಆ ಕಡೆಗೆ ಹೋಗುವಿರಾ? ಆ ದಾರಿಯಲ್ಲಿ ನಲುವತ್ತು ಮಂದಿಗಿಂತ ಕಡಿಮೆ ಯಾಗಿ ಹೋದವರಾರೂ ಉಳಿಯಲಾರರು. ಹಾಗೆ ಯಾರೂ ಹೋಗುವುದಿಲ್ಲ. ಅಲ್ಲಿ ಭಯಂಕರನಾದ ಕಳ್ಳನೊಬ್ಬನಿದ್ದಾನೆ. ಒಬ್ಬಿಬ್ಬರಾಗಿ ಹೋದವ ರಾರೂ ಹಿಂದಿರುಗಿ ಬದುಕಿ ಬಂದುದಿಲ್ಲ. ಬದುಕಿ ದವರು ಹೆಬ್ಬೆರಳು ಕಳೆದುಕೊಳ್ಳಬೇಕಾಗುತ್ತದೆ!" ಎಂದು ಎಚ್ಚರಿಸಿದರು.




ಆದರೆ ಬುದ್ಧನು ಆ ಕುರುಬರ ಎಚ್ಚರಿಕೆಯನ್ನು ಲಕ್ಷ್ಯಮಾಡದೆ ಅರಣ್ಯದೊಳಗೆ ಮುಂದೆ ಮುಂದೆ ನಡೆದನು.

ಒಬ್ಬಂಟಿಗನಾಗಿ ನಡೆಯುತ್ತಿರುವ ಬುದ್ಧನನ್ನು ಅಂಗುಲಿಮಾಲಿ ನೋಡಿದನು. ಕಾಷಾಯ ವಸ್ತ್ರದೊಳಗೆ ಅವನು ಏನನ್ನೋ ಮರೆಸಿಟ್ಟುಕೊಂಡು ನಡೆಯುತ್ತಿದ್ದಾನೆ.

ಅಂಗುಲಿಮಾಲಿ ಭಯಂಕರವಾದ, ರಕ್ತದ ಕಲೆಗಳಿಂದ ತಳತಳಿಸುವ ಕತ್ತಿಯನ್ನು ಎತ್ತಿ ಝಳಪಿಸುತ್ತ, "ಯಾರು ನೀನು? ಅದೇನು ವಸ್ತ್ರದ ಮರೆಯಲ್ಲಿ? ಅದನ್ನಿತ್ತ ತೆಗೆದುಕೊಡು!" ಎಂದನು.

ಬುದ್ಧನು ಮುಗುಳುನಗುತ್ತ, ಕಾವಿ ವಸ್ತ್ರದ ಮರೆಯಲ್ಲಿ ಇಟ್ಟುಕೊಂಡಿದ್ದ ಭಿಕ್ಷಾ ಪಾತ್ರವನ್ನು ತೆಗೆದು ಅಂಗುಲಿಮಾಲಿಗೆ ಕೊಟ್ಟನು.

ಅಂಗುಲಿಮಾಲಿ ಅದನ್ನು ಹಿಡಿದು ಅತ್ತಿತ್ತ ತಿರುಗಿಸಿ ನೋಡಿ, "ಭಿಕ್ಷಾ ಪಾತ್ರ! ನೀನು ಭಿಕ್ಷೆ ಬೇಡುವವನಾದರೆ ಆಗಲಿ. ಆದರೆ ಬೇಕಂತ ನನ್ನನ್ನು ಹುಡುಕುತ್ತಾ ಬಂದ ಹಾಗೆ ಬಂದು, ನನ್ನ ಮುಂದೆ ನಿಂತು, ಮುಗುಳುನಗು ತೋರಿಸುತ್ತ ನನ್ನ ಕೈಗೆ ಈ ಹಾಳು ಚಿಪ್ಪನ್ನು ಕೊಡಬೇಕಾದರೆ ನಿನಗೆಷ್ಟು ಗರ್ವ! ನಿನಗೆ ಭಯವಿಲ್ಲವೇ? ಈ ಕತ್ತಿ ನೋಡಲಿಲ್ಲವೇ? ನಾನು ಯಾರೆಂದು ಗೊತ್ತಿಲ್ಲವೇ?" ಎಂದನು.

"ನೀನು ಮನುಷ್ಯನೆಂದು ಗೊತ್ತಾಗಿದೆ. ನಾನೂ ಮನುಷ್ಯನೇ. ಅಂದಮೇಲೆ ಭಯಪಡುವ ಕಾರಣವೇನಿದೆ?" ಎಂದನು ಬುದ್ಧ.

"ನಾನು ಸಾಧಾರಣದ ಮನುಷ್ಯನಲ್ಲ. ನೀನು ನನಗೆ ಹೆದರಿ ನಿನ್ನ ಹೆಬ್ಬೆರಳನ್ನು ಕೊಟ್ಟು ಪ್ರಾಣ ಉಳಿಸಿಕೊಂಡು ಹೋಗಬೇಕು, ಅಷ್ಟೇ. ಇಲ್ಲದಿದ್ದರೆ ನಿನ್ನನ್ನು ಕೊಂದು ಬೆರಳು ಕಡಿದುಕೊಳ್ಳುತ್ತೇನೆ. ನೋಡಿದಿಯಾ ನನ್ನ ಕೊರಳಲ್ಲಿರುವ ಹೆಬ್ಬೆರಳುಗಳ ಮಾಲೆ?" ಎಂದನು ಅಂಗುಲಿಮಾಲಿ.

"ನೀನು ನನ್ನನ್ನು ಕೊಂದುಬಿಡುವುದು ಬಹು ಸುಲಭ. ಅದು ದೊಡ್ಡ ಕೆಲಸವಲ್ಲ. ಕತ್ತಿಯೇ ಅದನ್ನು ಸುಲಭವಾಗಿ ಮಾಡುತ್ತದೆ. ಹುಟ್ಟಿದವನಿಗೆ ಎಂದೋ ಒಂದು ದಿನ ಸಾವು ಬಂದೇ ಬರುತ್ತದೆ. ಅದು ನನ್ನ ಪಾಲಿಗೆ ಈಗ ನಿನ್ನ ಕೆಲಸವಾಗಿ ಬಂದಿದ್ದರೆ ಕೊಂದುಬಿಡು. ಸಂತೋಷವಾಗಿ ಸಾಯುತ್ತೇನೆ. ಈ ದಿನ ನನ್ನನ್ನು ಕೊಲ್ಲುವಿ. ಹಾಗೆಯೇ ಒಂದು ದಿನ ನೀನೂ ಸಾಯುವವನೇ ತಾನೇ? ನನ್ನ ಹಾಗೆ ನಿಶ್ಚಿಂತೆಯಾಗಿ ನಗ.ತ್ತ ಮೃತ್ಯುವನ್ನು ಸ್ವೀಕರಿಸುವಿಯಾ? ನಾನು ಯಾವ ಪ್ರಾಣಿಗೂ ಹಾನಿ ಮಾಡಲಿಲ್ಲ. ನಿನಗೂ ಮಾಡುವುದಿಲ್ಲ. ಮನಸ್ಸಿನಲ್ಲಿಯೂ ನಿನ್ನನ್ನು ನಿಂದಿಸುವುದಿಲ್ಲ. ಏಕೆಂದರೆ ನಿನ್ನಲ್ಲಿ ಬೆಳೆದು ಬಂದ ಗುಣ ಅಂಥಾದ್ದು. ನಾನು ಸರಿಯಾಗಿ ಬದುಕಿದೆನೆಂಬ ತೃಪ್ತಿಯಲ್ಲಿ ಮೃತ್ಯುವಿಗೆ ತಲೆಯೊಡ್ಡುತ್ತೇನೆ. ನಿನಗೂ ಮರಣವು


Sankar

ಸಮಾಪಿಸಿದಾಗ ನನ್ನ ಹಾಗೆ ಆನಂದದಿಂದ ಸಾಯುವಂತಾಗಬೇಕು. ಅದೇ ನನ್ನ ಆಸೆ. ಕೊಲ್ಲು" ಎಂದನು ಬುದ್ಧ.

ಬುದ್ಧನ ಮಾತುಗಳನ್ನು ಕೇಳುತ್ತಿದ್ದ ಹಾಗೆ ಅಂಗುಲಿಮಾಲಿಯ ತಲೆ ತಿರುಗಿಹೋಯಿತು. ಏನೋ ಆಲೋಚನೆಗೆ ಬಿದ್ದನು. ತಾನು ಮಾಡಿದ ಘೋರ ಕೃತ್ಯಗಳನ್ನು ನೆನೆದುಕೊಂಡು ಕಂಪಿಸತೊಡಗಿದನು. ತನ್ನ ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಮಹಾ ಪಾಪಿಯಾದ ತನ್ನನ್ನು ಕ್ಷಮಿಸಬಲ್ಲವನು ಯಾವನು ? ಯಾರಿಗೆ ಅಷ್ಟು ದಯವಿರುತ್ತದೆ ? ಕಳ್ಳನಿಗೆ ಉಂಟಾದ ಆವೇದನೆಯಲ್ಲಿ ಬುದ್ಧನು ನೆನಪಿಗೆ ಬಂದನು. ಅದುವರೆಗೆ ಬುದ್ಧನನ್ನು ಕುರಿತು ಕೇಳಿದ್ದನು. ಹುಲಿಯನ್ನೂ ಜಿಂಕೆಯನ್ನೂ, ಹಾವನ್ನೂ ಕಪ್ಪೆಯನ್ನೂ ಒಂದೇ ದೃಷ್ಟಿಯಲ್ಲಿ ನೋಡುವ ಕರುಣಾಮೂರ್ತಿ ಬುದ್ಧನೆಂದು ಕೇಳಿದ್ದನು. ಈಗ ಆ ಬುದ್ಧನೇ ನನಗೆ ದಿಕ್ಕು ! ಬುದ್ಧನ ಮೂಲಮಂತ್ರವೆಂದು ಯಾರೋ ಹೇಳುತ್ತಿದ್ದ "ಬುದ್ಧಂ ಶರಣಂ ಗಚ್ಛಾಮಿ." ಎಂದು ತನಗೆ ತಾನೇ ಹೇಳಿಕೊಂಡನು.

"ಅಂಗುಲಿಮಾಲೀ ! ನಾನೇ ಬುದ್ಧನು ! ನಿನಗಾಗಿಯೇ ಬಂದಿದ್ದೇನೆ. ಆದುದರಿಂದಲೇ ನಿನಗೆ ಭಿಕ್ಷಾಪಾತ್ರೆಯನ್ನು ನೀಡಿದೆನು. ಕಳೆದ ಜೀವಿತವನ್ನು ಮರೆತುಬಿಡು. ಅದಕ್ಕೇ ಯಾರಿಗೂ ಕಳೆದ ಜನ್ಮಗಳು ನೆನಪಿರುವುದಿಲ್ಲ. ಈಗ ಸರಿಯಾದ ಮುಂದಿನ ದಾರಿಯನ್ನು ನೋಡು ! ಅದೇ ನಿನ್ನ ಹೊಸ ಜನ್ಮದ್ದು, ಬೌದ್ಧ ಭಿಕ್ಷುವಾಗಿ ನನ್ನ ಶಿಷ್ಯನಾಗಿ ಬಾ. ಹೋಗೋಣ ನಡೆ !" ಎಂದನು ಬುದ್ಧ.

"ಬುದ್ಧ ಭಗವಾನ್ !" ಎಂದು ಕೂಗುತ್ತಾ ಅಂಗುಲಿಮಾಲಿ ಬುದ್ಧನ ಪಾದಗಳ ಮೇಲೆ ಬಿದ್ದು, "ನಾನೊಬ್ಬನೇ ಒಳಿತು ಮಾಡಿಕೊಳ್ಳುವುದು ಸರಿಯಾಗದು. ನನ್ನ ಅನುಚರರೆಲ್ಲರೂ ನಿನ್ನ ಶಿಷ್ಯರು, ಭಿಕ್ಷುಗಳು !" ಎಂದು ಅಂಗುಲಿಮಾಲಿ ತನ್ನ ಪರಿವಾರದವರನ್ನೆಲ್ಲಾ ಕರೆದು, ತನ್ನ ಹಾಗೆ ಎಲ್ಲರನ್ನೂ ಅನುಗ್ರಹಿಸಬೇಕೆಂದು ಬೇಡಿಕೊಂಡನು.

ಅಂಗುಲಿಮಾಲಿಯೂ ಅವನ ಅನೇಕ ಮಂದಿ ಅನುಚರರೂ ಬುದ್ಧ ಭಿಕ್ಷುಗಳಾಗಿ ಬುದ್ಧನ ಹಿಂದೆ ಹೊರಟರು. ಒಬ್ಬನೇ ಅರಣ್ಯದೊಳಗೆ ಹೊಕ್ಕ ಬುದ್ಧನು, ದೊಡ್ಡ ಪರಿವಾರದೊಂದಿಗೆ ಹೊರಬಿದ್ದನು.

ಬುದ್ಧನ ಉಪದೇಶಗಳನ್ನು ಕೇಳಿ ಎಷ್ಟೋ ಧರ್ಮಬಾಹಿರರೂ, ದುಷ್ಟರೂ ತಮ್ಮ ಗತ ಜೀವಿತದ ಮೇಲೆ ಜಿಗುಪ್ಸೆಗೊಂಡು ಪಶ್ಚಾತ್ತಾಪದಿಂದ ಬುದ್ಧನ ಶಿಷ್ಯರಾಗಿ, ಭಿಕ್ಷುಗಳಾಗಿ, ಸಂಘ ಸೇವೆಗೆ ಅಂಕಿತರಾಗಿ ಶೇಷ ಜೀವಿತವನ್ನು ಪುನೀತ ಮಾಡಿಕೊಂಡರು.



# ವೃತ್ತಿ ಧರ್ಮ

ಶಿವಪುರವೆಂಬ ಗ್ರಾಮದಲ್ಲಿ ರಾಮನಾಥನೆಂಬ ವೈದ್ಯನಿದ್ದನು. ಅವನು ಬಡಬಗ್ಗರಿಗೆಲ್ಲ ಉಚಿತವಾಗಿಯೇ ವೈದ್ಯ ನಡೆಸುವನು. ಸ್ವಲ್ಪ ಸ್ಥಿತಿವಂತರು ಅವರಾಗಿ ಏನಾದರೂ ಕೊಟ್ಟರೆ ತೆಗೆದುಕೊಳ್ಳುವನು. ಬಡವರಾರಾದರೂ ತಮ್ಮ ಶಕ್ತಿಗೆ ಮೀರಿ ಹಣ ಕೊಡುವರೆಂದು ತಿಳಿದರೆ ಅದನ್ನು ತೆಗೆದುಕೊಳ್ಳದೆ, ಅವರಿಗೆ ಚೆನ್ನಾಗಿ ಬಯ್ದು ಬುದ್ಧಿ ಹೇಳುವನು.

ಒಂದು ದಿನ ರಾತ್ರಿ ಅವನು ಗಾಢ ನಿದ್ರೆಯಲ್ಲಿದ್ದಾಗ ಹೊರಬಾಗಿಲು ಶಬ್ದವಾಯಿತು. ಅವನು ಎದ್ದು ಬಾಗಿಲು ತೆರೆದನು.

ಬಾಗಿಲ ಹೊರಗೆ ಒಬ್ಬ ಯುವಕನೂ ಇನ್ನೊಬ್ಬ ಮುದುಕನೂ ನಿಂತಿದ್ದರು. ಯುವಕನು ಪಕ್ಕದ ಗ್ರಾಮದವನು. ಅವನ ತಂಗಿ ಹೊಟ್ಟೇ ನೋವಿನಿಂದ ನರಳುತ್ತಿದ್ದಾಳಂತೆ ಮುದುಕನದು ಶಿವಪುರವೇ. ಅವನ ಮೊಮ್ಮಗಳು ವಿಷಜ್ವರದಿಂದ ಬಾಧೆಪಡುತ್ತಿದ್ದಾಳಂತೆ.

"ನಿಮ್ಮಿಬ್ಬರಲ್ಲಿ ಔಷದ ಚಿಕಿತ್ಸೆಗಳಿಗೆ ಯಾರು ಹಣಕೊಡುವ ಸ್ಥಿತಿಯಲ್ಲಿದ್ದೀರಿ ?" ಎಂದು ವೈದ್ಯ ರಾಮನಾಥನು ಅವರನ್ನು ಕೇಳಿದನು.

"ನಾನು ಸ್ಥಿತಿವಂತ. ನೀವು ಎಷ್ಟು ಕೇಳುವಿರೋ ಅಷ್ಟು ಹಣ ಕೊಟ್ಟೇನು" ಎಂದನು ಯುವಕ.

ಮುದುಕನು ಮಾತ್ರ ಮಾತಾಡಲಿಲ್ಲ.

ಆಗ ರಾಮನಾಥನು ಯುವಕನೊಂದಿಗೆ, "ಪಕ್ಕದ ಬೀದಿಯಲ್ಲಿರುವ ರಾಮಾಲಯದ ಇದಿರಿನಲ್ಲಿ ಕೃಷ್ಣಾಚಾರ್ಯರೆಂಬ ಒಳ್ಳೆಯ ವೈದ್ಯರಿದ್ದಾರೆ. ಆದರೆ ಅವರು ಹಣ ತೆಗೆದುಕೊಳ್ಳದೆ ವೈದ್ಯಮಾಡುವುದಿಲ್ಲ. ನೀನು ಹಣ ಕೊಡುವ ಸ್ಥಿತಿಯಲ್ಲಿರುವುದರಿಂದ, ಅವರನ್ನು ನಿನ್ನ ಗ್ರಾಮಕ್ಕೆ ಕರೆದುಕೊಂಡು ಹೋಗು. ನಾನು ನಿನ್ನೊಂದಿಗೆ ಬಂದರೆ ಕೃಷ್ಣಾಚಾರ್ಯರು ಈ ಬಡವನ ಮನೆಗೆ ಹೋಗಲಿಕ್ಕಿಲ್ಲ. ಆದ್ದರಿಂದ ನಾನು ಇವನ ಮೊಮ್ಮಗಳನ್ನು ನೋಡಲು ಹೋಗುತ್ತೇನೆ. ವ್ಯತ್ಯಾಸವಾಗಿ ತಿಳೀಬೇಡ" ಎಂದು ಹೇಳಿ ಮುದುಕನೊಂದಿಗೆ ಹೊರಟನು.





# ಕ್ರಮಶಿಕ್ಷಣ

ಇರಾಕ್ ದೇಶದ ಒಂದು ಸಣ್ಣ ಪಟ್ಟಣದಲ್ಲಿ ಒಂದು ಪಾಠಶಾಲೆ ಇದ್ದಿತು, ಅಲ್ಲಿಗೆ ಹಸನ್ ಅಬ್ದಾಲೀ ಎಂಬ ಉಪಾಧ್ಯಾಯನು ಹೊಸದಾಗಿ ಬಂದನು. ಅವನಿಗೆ ತನ್ನ ಬೋಧನಾಶಕ್ತಿಯಲ್ಲಿಯೂ, ವಿದ್ಯಾರ್ಥಿಗಳಿಗೆ ಕ್ರಮಶಿಕ್ಷಣ ನೀಡುವುದರಲ್ಲಿಯೂ ತುಂಬ ನಂಬುಗೆ ಇದ್ದಿತು. ಇದರಲ್ಲಿ ತನ್ನ ಪದ್ಧತಿಯೇ ಸರಿಯೆಂದೂ, ತನ್ನಂತಹ ಉಪಾಧ್ಯಾಯರು ಬೇರೆ ಯಾರೂ ಇಲ್ಲವೆಂದೂ ಆತನಿಗೆ ಹೆಮ್ಮೆ, ದುರಭಿಪ್ರಾಯ. ತನ್ನ ಅಭಿಪ್ರಾಯವನ್ನು ಹತ್ತು ಜನರೊಂದಿಗೆ ಹೇಳಿಕೊಳ್ಳುವುದರಲ್ಲಿ ಅವನಿಗೊಂದು ಪ್ರತ್ಯೇಕ ಸಂತೋಷ.

ಯಾವ ವಿದ್ಯಾರ್ಥಿಯಾದರೂ ಒಂದು ನಿಮಿಷ ತಡ ಮಾಡಿ ಬಂದರೆ ನಾಲ್ಕು ಸುರಳೀ ಬೆತ್ತದ ಬಿಸಿ ಬಿಸೀ ಛಡಿ ಕೊಡುತ್ತಿದ್ದನು. ಪಾಠ ಹೇಳುವಾಗ ಯಾವನಾದರೂ ಆಚೆಗೆ ತಲೆ ತಿರುಗಿದರೆ ಹತ್ತು ಬೆತ್ತದ ಪೆಟ್ಟು ಶಿಕ್ಷೆ.

ಮತ್ತೊಂದು ವಿಶೇಷವೇನೆಂದರೆ, ಯಾವನಾದರೂ ಸೀನಿಬಿಟ್ಟರೆ ಎಲ್ಲಾ ವಿದ್ಯಾರ್ಥಿಗಳೂ ಎದ್ದು ನಿಂತು ಕೊಳ್ಳಲು ಆಜ್ಞಾಪಿಸಿ, ಅವರಿಂದ ಮೂರುಸಾರಿ " ದೇವರು ನಮ್ಮನ್ನು ಕ್ಷಮಿಸಲಿ " ಎಂದು ಅದೊಂದು ಶಾಸ್ತ್ರ ಪದ್ಧತಿ ಎಂಬಂತೆ ಹೇಳಿಸುತ್ತಿದ್ದನು.

ಕ್ರಮಶಿಕ್ಷಣಗಳನ್ನು ಇಷ್ಟೊಂದು ಕಠಿಣವಾಗಿ ಅಮಲುಪಡಿಸುವುದು ಒಳ್ಳೆಯದಲ್ಲವೆಂದು ಅವನ ಮಿತ್ರರೊಬ್ಬಿಬ್ಬರು ಹೇಳಿ ನೋಡಿದರು. ಅಬ್ದಾಲಿ ಅವರ ಮಾತುಗಳನ್ನು ಲಕ್ಷ್ಯಮಾಡದೆ, " ನಿಮಗೆ ಗೊತ್ತಿಲ್ಲ. ಮನಸ್ಸಿಗೆ ಬೆತ್ತದ ಪೆಟ್ಟಿನ ಗುರುತು ನೆನಪಿರುವ ಹಾಗೆ ಬೇರೆ ಯಾವುದೂ ನೆನಪಿರದು. ವಿದ್ಯಾರ್ಥಿಗಳ ಬುದ್ಧಿಗೆ ಪಾಠವೂ ಅಂಟಲಾರದು. ಶಿಕ್ಷೆಗಳೇ ಪಾಠಗಳಿಗೆ ಅಂಟು. ಆದುದರಿಂದಲೇ ಪಾಠವನ್ನು ಶಿಕ್ಷಣವೆಂತಲೂ ಹೇಳುತ್ತಾರೆ. ಯಾರೋ ಒಬ್ಬರು ಸೀನಿದರೆ ಎಲ್ಲರೂ ಕೈಕಟ್ಟಿಕೊಂಡು ನಿಲ್ಲುವುದರಿಂದ ಅವರೊಳಗೆ ಒಂದು ಐಕ್ಯತಾ ಭಾವನೆ ಉಂಟಾಗುತ್ತದೆ " ಎನ್ನುತ್ತಿದ್ದನು.

ಈ ಬಗೆಯ ಹೊಸ ಉಪಾಧ್ಯಾಯನ ಬೋಧನಾ ಪದ್ಧತಿಗಳು ಪಟ್ಟಣದಲ್ಲಿರುವ ಅನೇಕ ಮಂದಿ ವಿದ್ಯಾರ್ಥಿಗಳ ತಂದೆತಾಯಿಗಳಿಗೆ ಅವನ ಪದ್ಧತಿ ಒಳ್ಳೆಯದೇ ಅನಿಸಿ ಚೆನ್ನಾಗಿ ಹಿಡಿಸಿದುವು. ಇವನೊಬ್ಬ ಒಳ್ಳೆಯ ಗಟ್ಟಿಗ ಉಪಾಧ್ಯಾಯನೇ ಅಂದುಕೊಂಡರು.

ಅರೇಬಿಯಾ ಕಥೆ

ಒಮ್ಮೆ ಕೆಲವರು ಅಬ್ದಾಲಿಯ ಕಿವಿಗೆ ಬೀಳುವ ಹಾಗೆ "ಈ ಹೊಸ ಉಪಾಧ್ಯಾಯರ ಕ್ರಮ ಪದ್ಧತಿಯ ಶಿಕ್ಷೆಗಳಿಂದ ನಮ್ಮ ಮಕ್ಕಳು ಬಹುಬೇಗ ಪಂಡಿತರಾಗುತ್ತಾರೆ. ಈ ಮೊದಲು ಪಾಠಶಾಲೆಗಳಲ್ಲಿ ಉಪಾಧ್ಯಾಯರಾಗಿರುವವರಿಗೆ ಪಾಠ ಹೇಳುವುದರ ಹೊರತು ಶಿಕ್ಷೆಯಲ್ಲಿ ಕ್ರಮವೂ ಇಲ್ಲ, ಪದ್ಧತಿಯೂ ಇಲ್ಲ. ಅದಕ್ಕೇ ಮಕ್ಕಳು ದಡ್ಡರಾಗುತ್ತಾರೆ." ಎನ್ನುತ್ತಿದ್ದರು.

ವರ್ಷಕ್ಕೊಂದು ಸಾರಿ ವಿದ್ಯಾರ್ಥಿಗಳನ್ನು ಪಟ್ಟಣದ ಪರಿಸರಗಳಲ್ಲಿರುವ ಉದ್ಯಾನವನ ಪ್ರಾಂತಗಳಿಗೆ ವಿದ್ಯಾರ್ಥಿಗಳನ್ನು ವಿನೋದಯಾತ್ರೆಗೆ ಕರೆದೊಯ್ಯುವ ಪದ್ಧತಿ ಇದ್ದಿತು. ಹಾಗೆ ಅಬ್ದಾಲೀ ಉಪಾಧ್ಯಾಯನ ಮುಂದಾಳ್ತನದಲ್ಲಿ ವಿದ್ಯಾರ್ಥಿಗಳೆಲ್ಲ ಹೊರಟರು. ಅವರು ಪಟ್ಟಣವನ್ನು ದಾಟಿ ಸ್ವಲ್ಪ ದೂರ ಹೋಗಿ, ವಿನೋದಯಾತ್ರೆ ಮುಗಿಸಿಕೊಂಡು ಸಾಯಂಕಾಲದ ಹೊತ್ತಿಗೆ ಹಿಂದಿರುಗಿ ಬರತೊಡಗಿದರು.

ಆಗ ಇನ್ನೂ ಬಿಸಿಲಿನ ಬೇಗೆ ಕಡಿಮೆಯಾಗಿರಲಿಲ್ಲ. ವಿದ್ಯಾರ್ಥಿಗಳು ಕೆಲವರು ಬಹಳ ದಾಹವಾಗಿದೆಯೆಂದು ಅಬ್ದಾಲಿಯೊಂದಿಗೆ ಹೇಳಿದರು. ಅವರ ಹತ್ತಿರ ಒಂದೇ ಒಂದು ಬಾಲ್ದಿ ಮಾತ್ರವೇ ಇದ್ದಿತು. ದಾರಿಯಲ್ಲಿ ಒಯ್ದಿದ್ದ ನೀರು ಮುಗಿದು ಹೋಗಿತ್ತು.

ಅಬ್ದಾಲಿ ಸುತ್ತಲೂ ದೃಷ್ಟಿ ಹರಡಿಸಿ ನೋಡಿ, "ಓ ಅಲ್ಲಿ ಒಂದು ಬಾವಿ ಇದೆ. ಅದರ ಹತ್ತಿರ ಹಗ್ಗವೂ ಕಾಣುತ್ತದೆ. ಎಲ್ಲರಿಗೂ ದಾಹವಾಗಿದೆಯಷ್ಟೆ ? ದಾಹವನ್ನು ಕಟ್ಟಿಕೊಳ್ಳುವುದು ಬಹಳ ಕಷ್ಟ. ಬನ್ನಿ. ನಾವು ಹೋಗಿ ಬಾಲ್ದಿಯಲ್ಲಿ ನೀರು ಸೇದಿಕೊಂಡು ನೀರು ಕುಡಿಯೋಣ" ಎಂದು ಅವರನ್ನೆಲ್ಲ ಅಲ್ಲಿಗೆ ಕರೆದುಕೊಂಡು ಹೋದನು.

ಆದರೆ ಅದೊಂದು ಪಾಳುಬಾವಿಯಾಗಿತ್ತು, ತಳದಲ್ಲಿ ನೀರಿರುವುದು ಕಾಣುತ್ತಿತ್ತು. ಜರಿದುಬಿದ್ದ ಕಲ್ಲುಗಳ ಕಾರಣದಿಂದ ಎಷ್ಟು ಪ್ರಯತ್ನಪಟ್ಟರೂ



ಕೈಗಳು ನೊಂದುವೇ ಹೊರತು, ಬಾಲ್ದಿಯನ್ನು ನೀರಿನಲ್ಲಿ ಮುಳುಗಿಸಲಿಕ್ಕೆ ಯಾರಿಗೂ ಆಗಲಿಲ್ಲ.

ಅಬ್ದಾಲಿ ವಿದ್ಯಾರ್ಥಿಗಳೊಂದಿಗೆ. "ನಾನು ಬಾವಿಗೆ ಇಳಿದು ಬಾಲ್ದಿಯನ್ನು ನೀರಿಸಿಂದ ತುಂಬಿಸಿ ಕೊಡುತ್ತೇನೆ. ನೀವು ಸೇದಿಕೊಂಡು ಬಿಂದಿಗೆಗೆ ತುಂಬಿಸಿಕೊಳ್ಳಿರಿ. ಆಮೇಲೆ ನಾನು ಹಗ್ಗದ ಸಹಾಯದಿಂದ ಮೇಲೆ ಬರುತ್ತೇನೆ" ಎಂದು ತನ್ನ ಸೊಂಟಕ್ಕೆ ಹಗ್ಗ ಕಟ್ಟಿಕೊಂಡು ಬಾವಿಗೆ ಇಳಿದನು. ವಿದ್ಯಾರ್ಥಿಗಳು ಹಗ್ಗವನ್ನು ಮೆಲ್ಲನೆ ಬಿಡುತ್ತ ಬಾವಿಯ ತಳದವರೆಗೆ ಬಿಟ್ಟರು.

ಅಲ್ಲಿ ನೀರಿಗೆ ಅಡ್ಡವಾಗಿ ಮೇಲಿಂದ ಬಿದ್ದ ದೊಡ್ಡದೊಂದು ಕಲ್ಲು ಇದ್ದಿತು, ಅಬ್ದಾಲಿ ಅದನ್ನು ಬದಿಗೆ ಸರಿಸಿ ಬಾಲ್ದಿಯನ್ನು ನೀರಿನಿಂದ ತುಂಬಿಸಿದನು. ತನ್ನ ನಡುವಿಗೆ ಬಿಗಿದ ಹಗ್ಗವನ್ನು ಬಿಚ್ಚಿ ಬಾಲ್ದಿಗೆ ಕಟ್ಟಿದನು. ವಿದ್ಯಾರ್ಥಿಗಳು ಆ ನೀರಿನ ಬಾಲ್ದಿಯನ್ನು ಮೇಲಕ್ಕೆ ಎಳೆದುಕೊಂಡರು.

ಹೀಗೆ ಅಬ್ದಾಲಿ ಐದುಸಾರಿ ಬಾಲ್ದಿಯನ್ನು ನೀರಿಸಿಂದ ತುಂಬಿಸಿದನು, ವಿದ್ಯಾರ್ಥಿಗಳೆಲ್ಲರ ದಾಹವೂ ತೀರಿತು.

ಆಮೇಲೆ ವಿದ್ಯಾರ್ಥಿಗಳು ಬಾಲ್ದಿಯನ್ನು ಹಗ್ಗದಿಂದ ಬಿಚ್ಚಿಟ್ಟು, ಅಬ್ದಾಲಿಗಾಗಿ ಹಗ್ಗವನ್ನು ಬಾವಿಯೊಳಗೆ ಇಳಿಸಿದರು.

ಅಬ್ದಾಲಿ ಹಗ್ಗವನ್ನು ತನ್ನ ಸೊಂಟಕ್ಕೆ ಬಿಗಿದುಕೊಂಡನು. ವಿದ್ಯಾರ್ಥಿಗಳು ಅವನನ್ನು ಜಾಗರೂಕತೆಯಿಂದ ಮೇಲಕ್ಕೆ ಎಳೆಯ ತೊಡಗಿದರು. ಅವನು ಬಾವಿಯ ಅಂಚಿಗೆ ಬರಲು ಎರಡು ಮೂರು ಅಡಿಗಳಷ್ಟು ದೂರವಿರುವಾಗ, ವಿದ್ಯಾರ್ಥಿಗಳಲ್ಲಿ ಒಬ್ಬನು ದೊಡ್ಡ ದನಿಯಿಂದ ಸೀನಿದನು. ಕೂಡಲೇ ಎಲ್ಲಾ ಹುಡುಗರೊಂದಿಗೆ ಹಗ್ಗ ಎಳೆಯುವವರೂ ಸಹ ಹಗ್ಗವನ್ನು ಬಿಟ್ಟು ಕೈಗಳನ್ನು ಕಟ್ಟಿಕೊಂಡು "ದೇವರು ನಮ್ಮನ್ನು ಕ್ಷಮಿಸಲಿ!" ಎಂದು ಮೂರು ಸಾರಿ ಕೂಗಿದರು.

ತಮ್ಮ ತಪ್ಪನ್ನು ವಿದ್ಯಾರ್ಥಿಗಳು ತಿಳಿಯುವುದರೊಳಗೇ ಅಬ್ದಾಲಿ ಅಷ್ಟೆತ್ತರದಿಂದ ಬಾವಿಯ ಅಡಿಗೆ ಬಿದ್ದುಬಿಟ್ಟಿದ್ದನು. ಸೊಂಟಕ್ಕೆ ಭಾರಿ ಪೆಟ್ಟು.

ಅಬ್ದಾಲಿ ಕೆಟ್ಟ ಧ್ವನಿಯಿಂದ ಗಟ್ಟಿಯಾಗಿ ಕೂಗುತ್ತಿದ್ದನು. ವಿದ್ಯಾರ್ಥಿಗಳು ಹೆದರಿ ದಾರಿಯಲ್ಲಿ ಹೋಗುವವರ ಸಹಾಯಕ್ಕಾಗಿ ಕೂಗ ತೊಡಗಿದರು.

ಈ ಗಲಾಟೆ ಕೇಳಿ ಕೆಲವರು ಓಡೋಡಿ ಬಂದರು. ಅಬ್ದಾಲಿಯನ್ನು ಬಹು ಕಷ್ಟದಿಂದ ಬಾವಿಯಿಂದ ಮೇಲಕ್ಕೆ ಎತ್ತಿದರು.

ಅಬ್ದಾಲಿಯ ನೋವು ಕಡಿಮೆಯಾಗಲು ಒಂದು ತಿಂಗಳಾಯಿತು. ಈ ಅನುಭವದಿಂದ ಅವನ ಕ್ರಮಶಿಕ್ಷಣದಲ್ಲಿ ಹಿಂಸೆಗಳು ಪೂರ್ತಿ ಮಾಯವಾದುವು.



# ಅವಮಾನ

**ಕೆ**ಪ್ಪೂರಿನ ಭೂಪಾಲನೆಂಬವನು ಬೆಳ್ಳೂರಿನ ನಿವಾಸಿಯಾದ ವೀರಯ್ಯನ ಮಗನಿಗೆ ತನ್ನ ಮಗಳನ್ನು ಕೊಡಬೇಕೆಂದುಕೊಂಡನು.

ಆ ಸಂಗತಿ ತಿಳಿದು ವೀರಯ್ಯನು ತನ್ನ ಬಳಗದವರೊಂದಿಗೆ ಭೂಪಾಲನ ಮನೆಗೆ ಹುಡುಗಿಯನ್ನು ನೋಡಲು ಬಂದನು. ಹುಡುಗಿ ಅವರಿಗೆ ಹಿಡಿಸಿತು. ವೀರಯ್ಯನಿಗಿರುವ ಆಸ್ತಿ ಪಾಸ್ತಿ ಮೊದಲಾದುವು ಭೂಪಾಲನಿಗೂ ತೃಪ್ತಿಯಾಯಿತು.

ಭೂಪಾಲನು ಮದುವೆಗೆ ಮುಹೂರ್ತ ನಿಶ್ಚಯಿಸಲು ಕಾಳಪ್ಪನೆಂಬ ಸ್ನೇಹಿತನನ್ನು ಕರೆದುಕೊಂಡು ವೀರಯ್ಯನ ಮನೆಗೆ ಹೋದನು. ವೀರಯ್ಯನು ಗ್ರಾಮದೊಳಗಿನ ನಾಲ್ಕಾರು ದೊಡ್ಡ ಮನುಷ್ಯರನ್ನೂ ತನ್ನ ಮನೆಗೆ ಕರೆದಿದ್ದನು.

ಸಂಬಂಧಿಗಳಾಗಲಿರುವವರು ಕೊಡುಕೊಳ್ಳುವ ಲಾಂಛನಗಳನ್ನು ಕುರಿತು ಮಾತಾಡುತ್ತಿದ್ದರು. ಅಷ್ಟರಲ್ಲಿ ವೀರಯ್ಯನ ಮಗಳು ಸುಗುಣ ಎಂಬ ಹುಡುಗಿ ಅಳುತ್ತಾ ಮನೆಯೊಳಗೆ ಬಂದಳು. ಅವಳೂ ಮದುವೇ ವಯಸ್ಸಿಗೆ ಬಂದ ಹುಡುಗಿಯೇ.

ವೀರಯ್ಯನು ಏನು ನಡೆಯಿತೆಂದು ಮಗಳನ್ನು ಪ್ರಶ್ನಿಸಿದನು. ಅವಳು ತಂದೆಯೊಂದಿಗೆ, "ಅಪ್ಪಾ, ನಾನು ಗುಡಿಗೆ ಹೋಗಿ ಬರುವಾಗ ಆ ನಾರಾಯಣ ನನ್ನ ಜಡೆ ಹಿಡಿದು ಎಳೆದ!" ಎಂದಳು ಕಣ್ಣು ಒರೆಸಿಕೊಳ್ಳುತ್ತಾ.

"ಅವನೊಬ್ಬ ದುಷ್ಟ ರೌಡಿ. ನೀನೇಕೆ ಒಬ್ಬಳೇ ಗುಡಿಗೆ ಹೋಗಿ ಬಂದಿ?" ಎಂದನು ವೀರಯ್ಯ ಕೋಪದಿಂದ.

"ನಿನಗೆ ಎಷ್ಟುಸಾರಿ ಹೇಳಿದರೂ ಬುದ್ಧಿ ಇಲ್ಲ. ಒಬ್ಬಳೇ ಗುಡಿಗೆ ಹೋಗುವುದೆಂದರೇನು?" ಎಂದು ವೀರಯ್ಯನ ಮಗ ಕೂಡಾ ತಂಗಿಯನ್ನು ಜರೆದು ಮಾತಾಡಿದನು.

"ಸರಿಸರಿ! ಇನ್ನೊಮ್ಮೆ ಬಂದಾಗ ಮಾತಾಡೋಣ, ವೀರಯ್ಯನವರೇ" ಎಂದು ಹೇಳಿ ಭೂಪಾಲನು ಅಲ್ಲಿಂದ ಎದ್ದು ಕಾಳಪ್ಪನೊಂದಿಗೆ ಹೊರಟು ಹೋದನು.

ದಾರಿಯಲ್ಲಿ ಕಾಳಪ್ಪನು ಭೂಪಾಲನೊಂದಿಗೆ. "ಪಕ್ಕನೆ ಎದ್ದು ಹೊರಟಿರೇಕೆ?" ಎಂದು ಕೇಳಿದನು.

"ಮನೆಯ ಹೆಣ್ಣು ಮಕ್ಕಳಿಗೆ ಅವಮಾನವಾದರೆ ಆ ತಂದೆಮಗಂದಿರು ಕೈಲಾಗದವರ ಹಾಗೆ ಸುಮ್ಮನಿದ್ದಾರೆ. ನಾಳೆ ಸೊಸೆಯಾದವಳಿಗೆ ಹೀಗೇನಾದರೂ ಆದರೂ ಅಷ್ಟೇ ತಾನೆ? ಆದ್ದರಿಂದ. ನನ್ನ ಮಗಳನ್ನು ಆ ಮನೆಗೆ ಸೊಸೆಯಾಗಿ ಕೊಡುವುದಿಲ್ಲ, ಬಿಡಿ!" ಎಂದನು ಭೂಪಾಲ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



S. B. Prasad



M. C. Morabad

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಡಿಸೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆನಂತರ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : "ಚೇಷ್ಟೆ ಮಾಡದೆ ದಿನವೆಲ್ಲಾ ಹೀಗೇ ಕುಳಿತಿದ್ದರೆ,

ಎರಡನೇ ಫೋಟೋ : ನಿನಗೆ ನೂರೊಂದು ಸಲಾಮು ಗೊತ್ತಾ, ಯಾ?"

ಕಳುಹಿಸಿದವರು : ಜಿ. ಕೆ. ವಸುಂಧರ, ಕನಮಡುಗು, ಕೂಡ್ಲಿಗಿ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಸರ್ ಐಜಾಕ್ ನ್ಯೂಟನ್. ೨. ಮೂರನೇ ರಿಚರ್ಡ್, ಹದಿನೈದನೇ ಲೂಯಿಸ್, ನೆಪೋಲಿಯನ್ ಬೋನಪಾರ್ಟ್. ೩. ಫ್ಲಾರೆನ್ಸ್ ನೈಟಿಂಗೇಲ್. ೪. ಅಲೆಗ್ಸಾಂಡರ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

**Results of Chandamama Camlin Colouring Contest No.37 (Kannada)**